# ಈ ಪುಸ್ತಕವನ್ನು ಕುರಿತು

"ಜನರ ಸೌಖ್ಯಕ್ಕೆ ಧರ್ಮವೇ ಮೂಲ; ಧರ್ಮಕ್ಕೆ ಅರ್ಥವೇ—ವಿವಿಧ ಲೌಕಿಕ ಸಂಪತ್ತೇ—ಮೂಲ; ಅರ್ಥಕ್ಕೆ ರಾಜ್ಯವ್ಯವಸ್ಥೆಯೇ ಮೂಲ."—ಚಾಣಕ್ಯ

"ರಾಜಕೀಯ ವಿಚಾರ ನಮಗೇಕೆ" ಎನ್ನುವ ಜನ ಈ ಕಾಲದಲ್ಲಿ ಯಾರೂ ಇರಲಾರರು. ಈಗ ಜನರಿಗೆ ಎಲ್ಲೆಲ್ಲೂ ದೇಶದ ಯೋಗಕ್ಷೇಮಗಳಿಗೆ ಸಂಬಂಧಪಟ್ಟ ವಿಷಯಗಳಲ್ಲಿ ಆಸಕ್ತಿಯೂ ರಾಜ್ಯಕಾರ್ಯಗಳಿಗೆ ತಾವೂ ಕೈಹಾಕಿ ಸರ್ಕಾರವನ್ನು ನಡೆಸಬೇಕೆಂಬ ಆಶೆಯೂ ಹೆಚ್ಚುತ್ತಿವೆ. ಆದರೆ ಪ್ರಜೆಗಳು ಅಧಿಕಾರಸಂಪಾದನೆಗಾಗಿ ತೋರಿದಷ್ಟು ಉತ್ಸಾಹವನ್ನು ಜ್ಞಾನಸಂಪಾದನೆಗಾಗಿಯೂ ತೋರಿದರೆ ಮಾತ್ರ ಅವರ ಅಧಿಕಾರ ಸಾರ್ಥಕವಾಗುತ್ತದೆ. ರಾಜ್ಯದ ತತ್ತ್ವಗಳನ್ನು ಅರಿಯದವರಿಗೆ ಅಧಿಕಾರ ದೊರೆತರೆ, ಅವರಿಂದ ಉಪಕಾರವಾಗುವುದಕ್ಕೆ ಪ್ರತಿಯಾಗಿ ಅಪಕಾರವೇ ಆದೀತು.

* * *

ಇದು ಪ್ರಜಾಯುಗ. ಈಗ ರಾಜ್ಯಕ್ಕೆ ಪ್ರಜೆಯೇ ಪ್ರಧಾನಾಂಗ; ಪ್ರಜೆಯೇ ಸಪ್ತಾಂಗಸ್ವಾಮಿ. ಪೂರ್ವಕಾಲದ ರಾಜ್ಯಜೀವನದಲ್ಲಿ ರಾಜನೆಂಬ ಸರ್ವಾಧಿಕಾರಿಗಿದ್ದ ಸ್ಥಾನ ಈ ದಿವಸ ರಾಜ್ಯದಲ್ಲಿ ರಾಷ್ಟ್ರಕನಿಗೆ ದೊರೆತಿದೆ. ಅವನ ಅರ್ಹತೆಗೆ ತಕ್ಕಂತೆ ರಾಜ್ಯದ ಗತಿ. ಪ್ರಜಾಮಂಡಲದಲ್ಲಿ ಸತ್ತ್ವಗುಣವೂ ನ್ಯಾಯಶ್ರದ್ಧೆಯೂ ಕರ್ತವ್ಯ

(ಮುಂದುವರಿದಿದೆ)

ವಿವೇಕವೂ ಎಷ್ಟೆಷ್ಟು ಮಾತ್ರವಿರುತ್ತವೆಯೋ ರಾಜ್ಯದ ವಿಚಕ್ಷಣೆ ಅಷ್ಟಷ್ಟು ಮಾತ್ರವಿರುತ್ತದೆ. ಪ್ರಜಾರಾಜ್ಯದ ಮೊದಲನೆಯ ಶತ್ರು ಪ್ರಜೆಯ ಅಜ್ಞಾನ, ಅಶಿಕ್ಷೆ.

ಪ್ರಜೆಗಳ ರಾಜಕೀಯಾಧಿಕಾರದೊಡನೆ ರಾಜಕೀಯ ಪರಿಜ್ಞಾನವು ಸೇರಿರದಿದ್ದರೆ ಅವರಿಂದ ದೇಶಕ್ಕೆ ಕ್ಷೇಮವಾಗಲಾರದು.

ಹೀಗಿರುವುದರಿಂದ, ಈ ಕೃತಿಯಲ್ಲಿ ರಾಜ್ಯಶಾಸ್ತ್ರದ ಮುಖ್ಯಾಂಶಗಳನ್ನು ಸಂಗ್ರಹವಾಗಿ ಮಹಾಜನರಿಗೆ ಅರಿಕೆಮಾಡಿದೆ.

* * *

ರಾಜ್ಯದ ಲಕ್ಷಣಪ್ರಯೋಜನಗಳು; ರಾಜ್ಯದ ಸ್ವರೂಪ; ರಾಜ್ಯವ್ಯವಸ್ಥೆ ಎಂದರೇನು? ಧರ್ಮಕ್ಕಾಗಿ ರಾಜ್ಯ; ರಾಜ್ಯದ ಸ್ವಾಮಿತ್ವ; ರಾಜ್ಯವ್ಯವಸ್ಥೆಯ ವಿಧವಿಧಾನಗಳು; ರಾಜ್ಯಯಂತ್ರದ ರಚನೆ—ಶಾಸನ ಸಂಸ್ಥೆ, ಕಾರ್ಯನಿರ್ವಾಹ ಸಂಸ್ಥೆ, ನ್ಯಾಯನಿರ್ಣಯ ಸಂಸ್ಥೆ; ರಾಜ್ಯದಲ್ಲಿ ರಾಜನ ಸ್ಥಾನ, ಅಧ್ಯಕ್ಷನ ಸ್ಥಾನ; ಮತ್ತು ರಾಜ್ಯದಲ್ಲಿ ಪ್ರಜಾತಂತ್ರ;—ಇವೇ ಮುಖ್ಯವಾದ ವರ್ಗೀಕರಣಗಳ ಮೂಲಕ ವಿಷಯವನ್ನು ವಿಸ್ತರಿಸಲಾಗಿದೆ. ಹೀಗೆ ಮಾಡುವುದರಲ್ಲಿ ನಮ್ಮ ಪುರಾತನ ಶಾಸ್ತ್ರಗ್ರಂಥಗಳನ್ನೂ ಪಾಶ್ಚಾತ್ಯರ ಆಧುನಿಕ ಶಾಸ್ತ್ರಗ್ರಂಥಗಳನ್ನೂ ಒಟ್ಟಿಗಿಟ್ಟುಕೊಂಡು ವಿಷಯ ಬೋಧಪ್ರದವಾಗುವಂತೆಯೂ ಮನೋರಂಜಕವಾಗುವಂತೆಯೂ ವಿಚಾರಮಾಡಲಾಗಿದೆ.

ಬೆಲೆ, ರೂ. ೩-೦-೦

**ಕಾವ್ಯಾಲಯ * ಪ್ರಕಾಶಕರು**

**ಮೈಸೂರು**

ಕನ್ನಡ ಕಾವ್ಯಮಾಲೆ

# ರಾಜ್ಯಾಂಗತತ್ತ್ವಗಳು

ಡಿ. ವಿ. ಜಿ.



ಮೈಸೂರು
ಕಾವ್ಯಾಲಯ :: ಪ್ರಕಾಶಕರು

# ಅರಿಕೆ

ಈ ಪ್ರಬಂಧದ ಬಹುಭಾಗ ಮೊದಲು ಪ್ರಕಟವಾದದ್ದು ೧೯೨೩ರ ಜೂನ್-ಡಿಸೆಂಬರುಗಳಲ್ಲಿ,—ಆಗ ನಾನು ನಡಸುತ್ತಿದ್ದ "ಕರ್ಣಾಟಕ ಜನಜೀವನ ಮತ್ತು ಅರ್ಥಸಾಧಕ ಪತ್ರಿಕೆ" ಎಂಬ ಮಾಸ ಪತ್ರಿಕೆಯಲ್ಲಿ. ಅದನ್ನು ಬರೆದದ್ದು ಅಂದಿಗೆ ಒಂದೆರಡು ವರ್ಷ ಹಿಂದೆ. ಹೀಗೆ ಸುಮಾರು ಮುವ್ವತ್ತೆರಡು ವರ್ಷಗಳಷ್ಟು ಹಳೆಯದು ಈ ಪ್ರಬಂಧ. ಈ ಮಾತು ಇಲ್ಲಿಯ ಮೊದಲನೆಯ ಹನ್ನೆರಡು ಪ್ರಕರಣಗಳಿಗೆ ಅನ್ವಯಿಸುತ್ತವೆ. ಕಡೆಯ ಮೂರು ಪ್ರಕರಣಗಳು ಹೊಸವು.

ಪತ್ರಿಕೆಯಲ್ಲಿ ಇದು ಪ್ರಕಟವಾಗುತ್ತಿದ್ದಾಗ ಓದಿ ಮೆಚ್ಚಿದವರಲ್ಲಿ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರೊಬ್ಬರು. ಅವರು ಇದನ್ನು ಬಹುವಾಗಿ ಕೊಂಡಾಡಿ, ಮೈಸೂರು ವಿಶ್ವವಿದ್ಯಾಲಯಕ್ಕಾಗಿ ಇಂಥ ಗ್ರಂಥವನ್ನು ಬರೆದುಕೊಡಬೇಕೆಂದು ನನಗೆ ಆಜ್ಞೆಮಾಡಿದರು; ನಾನು ಸಂತೋಷಿಸಿ ಕೃತಜ್ಞತೆಯಿಂದ ಒಪ್ಪಿಕೊಂಡೆ; ಆದರೆ ನನ್ನ ಇತರ ಚಿಂತೆ ಹವ್ಯಾಸಗಳ ಒತ್ತಡದಲ್ಲಿ ಆ ಕೆಲಸ ನಡೆಯದೆ ಹೋಯಿತು. ನಾನು ಆ ಪ್ರಿಯ ಪೂಜ್ಯಮಿತ್ರರಿಗೆ ಕೊಟ್ಟಿದ್ದ ಮಾತನ್ನು ೧೯೪೧ರ ಡಿಸೆಂಬರಿನಲ್ಲಿ ಪ್ರಕಟವಾದ ನನ್ನ "ರಾಜ್ಯಶಾಸ್ತ್ರ" ಗ್ರಂಥದಲ್ಲಿ ಅಲ್ಪಸ್ವಲ್ಪ ನಡಸಿದೆನೆಂದು ತೃಪ್ತಿ ತಂದುಕೊಂಡೆ.

ಆ ಗ್ರಂಥವನ್ನು ಬರೆದ ಕಾಲದಲ್ಲಿ ಈ ಪ್ರಬಂಧ ನನ್ನೆದುರಿಗಿರಲಿಲ್ಲ. ಇದಕ್ಕಾಗಿ ಹುಡುಕಾಡಲು ನನಗೆ ಆಗ ವಿರಾಮ ದೊರೆಯಲಿಲ್ಲ. ಈಚೆಗೆ ಶ್ರೀ ಚಿದಂಬರಂ ಅವರ ಒಂದು ಉದ್ದೇಶಕ್ಕಾಗಿ ನಾನು ಯಾವುದೋ ಹಳೆಯ ಕಾಗದಗಳನ್ನು

ಹುಡುಕುತ್ತಿದ್ದಾಗ ಇದು ಅಕಸ್ಮಾತ್ತಾಗಿ ಕಣ್ಣಿಗೆ ಬಿತ್ತು. ನೋಡಿದ್ದರಲ್ಲಿ ಈ ಪ್ರಬಂಧವು ಆ "ರಾಜ್ಯಶಾಸ್ತ್ರ" ಗ್ರಂಥದಲ್ಲಿ ತಕ್ಕಷ್ಟು ವಿಸ್ತರಿಸಲಾಗದಿದ್ದ ಕೆಲವು ಮುಖ್ಯಾಂಶಗಳನ್ನು ವಿಸ್ತಾರಪಡಿಸಿದೆಯೆಂದೂ, ಅಲ್ಲಿಯ ಕೆಲವು ಸಾರ ವಿಚಾರಗಳಿಗೆ ಪೀಠಿಕಾಪ್ರಾಯವಾಗಿದೆಯೆಂದೂ ತೋರಿತು. ಈ ಎರಡು ಪುಸ್ತಕಗಳಿಗೂ ಒಂದೆರಡು ಭಾಗಗಳಲ್ಲಿ ವಿಷಯ ಒಂದೇ ಎಂಬಂತೆ ಸ್ಥೂಲವಾಗಿ ಕಂಡರೂ, ಜಿಜ್ಞಾಸಿತಗಳಾಗಿರುವ ತತ್ತ್ವಗಳು ಸ್ವಭಾವದಲ್ಲಿ ಸೂಕ್ಷ್ಮವಾದವೂ ಹಾಗೆಯೇ ನಮಗೆ ಬಹಳ ಮುಖ್ಯವಾದವೂ ಆಗಿರುವ ಕಾರಣ ಇಲ್ಲಿಯ ಪುನರ್ವಿಚಿಂತನೆಯು ಅಯುಕ್ತವಾಗದು, ಉಪಯುಕ್ತವಾಗಬಹುದು ಎಂದು—ನನ್ನ ನಂಬಿಕೆ.

ಮೇ ೧೯೫೪. **ಡಿ. ವಿ. ಜಿ.**

# ವಿಷಯ ಸೂಚಿಕೆ

# ಋಷಿಗಳ ರಾಷ್ಟ್ರಗೀತೆ

(ಯಜುರ್ವೇದ—ತೈತ್ತಿರೀಯ ಬ್ರಾಹ್ಮಣ—ಅಶ್ವಮೇಧಯಾಗ ಪ್ರಕರಣ—ಕಾಂಡ ೩, ಪ್ರಪಾಠಕ ೮)

ರಾಷ್ಟ್ರಂ ವಾ ಅಶ್ವಮೇಧಃ|
ರಾಷ್ಟ್ರೇ ಖಲು ವಾ ಏತೇ ವ್ಯಾಯಚ್ಛನ್ತೇ ||

* * *

ಆ ಬ್ರಹ್ಮನ್ ಬ್ರಾಹ್ಮಣೋ ಬ್ರಹ್ಮವರ್ಚಸೀ ಜಾಯತಾ
ಮಿತ್ಯಾಹ|
ಬ್ರಾಹ್ಮಣ ಏವ ಬ್ರಹ್ಮವರ್ಚಸಂ ದಧಾತಿ|
ತಸ್ಮಾತ್ಪುರಾ ಬ್ರಾಹ್ಮಣೋ ಬ್ರಹ್ಮವರ್ಚಸ್ಯಜಾಯತ || ೧

ಆಸ್ಮಿನ್ ರಾಷ್ಟ್ರೇ ರಾಜನ್ಯ ಇಷವ್ಯಃ ಶೂರೋ
ಮಹಾರಥೋ ಜಾಯತಾಮಿತ್ಯಾಹ|
ರಾಜನ್ಯ ಏವ ಶೌರ್ಯಂ ಮಹಿಮಾನಂ ದಧಾತಿ|
ತಸ್ಮಾತ್ಪುರಾ ರಾಜನ್ಯ ಇಷವ್ಯಃ ಶೂರೋ ಮಹಾರಥೋಽ
ಜಾಯತ || ೨

ದೋಗ್ಧ್ರೀ ಧೇನುರಿತ್ಯಾಹ|
ಧೇನ್ವಾಮೇವ ಪಯೋ ದಧಾತಿ|
ತಸ್ಮಾತ್ಪುರಾ ದೋಗ್ಧ್ರೀ ಧೇನುರಜಾಯತ || ೩

ವೋಢಾನಡ್ವಾನಿತ್ಯಾಹ|
ಅನಡುಹ್ಯೇವ ವೀರ್ಯಂ ದಧಾತಿ|
ತಸ್ಮಾತ್ಪುರಾ ವೋಢಾನಡ್ವಾನಜಾಯತ || ೪

ಆಶುಃ ಸಪ್ತಿರಿತ್ಯಾಹ|
ಅಶ್ವ ಏವ ಜವಂ ದಧಾತಿ|
ತಸ್ಮಾತ್ಪುರಾಽಽಶುರಶ್ವೋಽಜಾಯತ || ೫

ಪುರಂಧಿರ್ಯೋಷೇತ್ಯಾಹ |
ಯೋಷಿತ್ಯೇವ ರೂಪಂ ದಧಾತಿ |
ತಸ್ಮಾತ್ ಸ್ತ್ರೀ ಯುವತಿಃ ಪ್ರಿಯಾ ಭಾವುಕಾ || ೬

ಜಿಷ್ಣೂ ರಥೇಷ್ಠಾ ಇತ್ಯಾಹ |
ಆಹ ವೈ ತತ್ರ ಜಿಷ್ಣೂ ರಥೇಷ್ಠಾ ಜಾಯತೇ |
ಯತ್ರೈತೇನ ಯಜ್ಞೇನ ಯಜನ್ತೇ || ೭

ಸಭೇಯೋ ಯುವೇತ್ಯಾಹ |
ಯೋ ವೈ ಪೂರ್ವವಯಸೀ | ಸ ಸಭೇಯೋ ಯುವಾ |
ತಸ್ಮಾದ್ಯುವಾ ಪುಮಾನ್ ಪ್ರಿಯೋ ಭಾವುಕಃ || ೮

ಅಸ್ಯ ಯಜಮಾನಸ್ಯ ವೀರೋ ಜಾಯತಾಮಿತ್ಯಾಹ |
ಆಹ ವೈ ತತ್ರ ಯಜಮಾನಸ್ಯ ವೀರೋ ಜಾಯತೇ |
ಯತ್ರೈತೇನ ಯಜ್ಞೇನ ಯಜನ್ತೇ || ೯

ನಿಕಾಮೇ ನಿಕಾಮೇ ನಃ ಪರ್ಜನ್ಯೋ ವರ್ಷತ್ವಿತ್ಯಾಹ |
ನಿಕಾಮೇ ನಿಕಾಮೇ ಹ ವೈ ತತ್ರ ಪರ್ಜನ್ಯೋ ವರ್ಷತಿ |
ಯತ್ರೈತೇನ ಯಜ್ಞೇನ ಯಜನ್ತೇ || ೧೦

ಫಲಿನ್ಯೋ ನ ಓಷಧಯಃ ಪಚ್ಯನ್ತಾಮಿತ್ಯಾಹ |
ಫಲಿನ್ಯೋ ಹ ವೈ ತತ್ರೌಷಧಯಃ ಪಚ್ಯನ್ತೇ |
ಯತ್ರೈತೇನ ಯಜ್ಞೇನ ಯಜನ್ತೇ || ೧೧

ಯೋಗಕ್ಷೇಮೋ ನಃ ಕಲ್ಪತಾಮಿತ್ಯಾಹ |
ಕಲ್ಪತೇ ಹ ವೈ ತತ್ರ ಪ್ರಜಾಭ್ಯೋ ಯೋಗಕ್ಷೇಮಃ |
ಯತ್ರೈತೇನ ಯಜ್ಞೇನ ಯಜನ್ತೇ || ೧೨



# ಸಾರಾಂಶ

ರಾಷ್ಟ್ರವೇ ಅಶ್ವಮೇಧಯಾಗವಲ್ಲವೆ ? ಈ ಜನರು ಉದ್ಯಮಿಸುವುದು ರಾಷ್ಟ್ರದಲ್ಲಿಯೇ, ಅದಕ್ಕಾಗಿಯೇ, ಅಲ್ಲವೆ ?

*　　*　　*　　*

ಬ್ರಾಹ್ಮಣವಂಶದಲ್ಲಿ ವೇದಶಾಸ್ತ್ರ ತತ್ತ್ವಜ್ಞನಾಗಿ ಬ್ರಹ್ಮವರ್ಚಸ್ಸುಳ್ಳ ಬ್ರಾಹ್ಮಣನು ಜನಿಸಲಿ. ಬ್ರಹ್ಮತೇಜಸ್ಸನ್ನು ತಂದುಕೊಡುವವನು ಬ್ರಾಹ್ಮಣ. ಆದ್ದರಿಂದ ಪೂರ್ವದಲ್ಲಿ ಅಂಥಾ ಬ್ರಾಹ್ಮಣರಾದರು ||೧||

ಈ ರಾಜ್ಯದಲ್ಲಿ ಶಸ್ತ್ರಾಸ್ತ್ರ ಸಂಪನ್ನನೂ ಶೂರನೂ ಮಹಾ ರಥಿಯೂ ಆದ ಕ್ಷತ್ರಿಯ ರಾಜನು ಉದಿಸಲಿ. ಶೌರ್ಯ ಮಹಿಮೆಗಳನ್ನು ತರುವವನು ಕ್ಷತ್ರಿಯ ||೨||

ಹಾಲುಕರೆಯುವ ಹಸುಗಳಾಗಲಿ ; ಹಸುವಿನ ಹಾಲೇ ಅಮೃತ ||೩||

ಭಾರವಳೆಯಲು ಬಲಿಷ್ಠವಾದ ಎತ್ತುಗಳಾಗಲಿ. ಅವುಗಳಿಂದಲೇ ವೀರ್ಯ ||೪||

ವೇಗವುಳ್ಳ ಕುದುರೆಗಳಾಗಲಿ ; ಅವುಗಳಿಂದಲೇ ಚಟವಟಿಕೆ ||೫||

ಸೌಂದರ್ಯವತಿಯರಾದ ಯುವತಿಯರು ಹುಟ್ಟಲಿ. ಅವರಿಂದಲೇ ಒಳ್ಳೆಯ ರೂಪ. ಅಂಥ ಯವ್ವನವತಿಯು ಪ್ರಿಯಳೂ ಮಂಗಳಕಾರಿಯೂ ಆಗುತ್ತಾಳೆ ||೬||

ರಥವೇರಿ ಹೊರಟು ಜಯಶೀಲನಾಗಿ ಬರುವ ಯೋಧನು ಹುಟ್ಟಲಿ— ಈ ಯಜ್ಞದ ಮಹಿಮೆಯಿಂದ ||೭||

ಸಭಾ ಯೋಗ್ಯರಾದ ಯುವಕರು ಹುಟ್ಟಲಿ. ಸಭ್ಯನಾದ ಪೂರ್ವ ವಯಸ್ಸಿನ ಗಂಡಸು ಪ್ರಿಯನೂ ಮಂಗಳಕರನೂ ಆಗುತ್ತಾನೆ ||೮||

ಈ ಯಜ್ಞಕರ್ತನು ವೀರನಾಗಲಿ; ಅವನಿಗೆ ವೀರನಾದ ಮಗನಾಗಲಿ ||೯||

ನಮಗೆ ಬೇಕು ಬೇಕಾದಾಗ ಬೇಕು ಬೇಕಾದಂತೆ ಇಂದ್ರನು ಮಳೆಗರೆಯಲಿ ||೧೦||

ಈ ಯಜ್ಞದ ಮಹಿಮೆಯಿಂದ ಗಿಡಮರಗಳು ಪಕ್ವಗಳಾದ ಫಲಗಳನ್ನು ಕೊಡಲಿ ||೧೧||

ನಮಗೆ ಶುಭ ಸಮೃದ್ಧಿಯೂ ನೆಮ್ಮದಿಯೂ ಉಂಟಾಗಿರಲಿ. ಈ ಯಜ್ಞದಿಂದ ಪ್ರಜೆಗಳಿಗೆ ಯೋಗಕ್ಷೇಮ ಪ್ರಾಪ್ತಿಯಲ್ಲವೆ ? ||೧೨||

# ರಾಜ್ಯಾಂಗತತ್ತ್ವಗಳು

---

## ೧. ರಾಜ್ಯಮೀಮಾಂಸೆಯ ಬೆಳವಣಿಗೆ

ಲೋಕವ್ಯವಹಾರಕ್ಕೆ ಸಂಬಂಧಪಟ್ಟ ಬಗೆಬಗೆಯ ಶಾಸ್ತ್ರಗಳು ಯುರೋಪಿಯನ್ನರಲ್ಲಿ ಸಂತತವಾಗಿ, ಎಡೆಬಿಡದೆ, ಬೆಳೆದುಕೊಂಡು ಬಂದಿರುವಂತೆ ಭಾರತೀಯರಲ್ಲಿ ಬೆಳೆದುಕೊಂಡು ಬಂದಿಲ್ಲ. ನಮ್ಮಲ್ಲಿ ಅನೇಕ ಲೌಕಿಕಶಾಸ್ತ್ರಗಳ ಮೂಲಗ್ರಂಥಗಳು ಬಹು ಪುರಾತನವಾದವುಗಳಿರುವುದೇನೋ ನಿಜ. ಜ್ಯೋತಿಷ, ಆಯುರ್ವೇದ, ಧನುರ್ವೇದ, ರಸವಾದ, ವೃಕ್ಷದೋಹಳ, ವಾಸ್ತು-ವಿಗ್ರಹಶಿಲ್ಪ, ರಾಜನೀತಿ, ಧರ್ಮಶಾಸ್ತ್ರ—ಇವೇ ಮೊದಲಾದ ಬಹು ಶಾಸ್ತ್ರಗಳಲ್ಲಿ ಪುರಾತನಾರ್ಯರು ಬಹು ವಿಧಗಳಾದ ಪರೀಕ್ಷೆಗಳನ್ನು ನಡಸಿ, ಬಹು ವಿಷಯಗಳನ್ನು ಪರಿಶೋಧಿಸಿ, ಅದ್ಭುತವಾದ ಪ್ರಜ್ಞೆಯನ್ನು ಸಂಪಾದಿಸಿದ್ದರೆಂದು ಅವರು ನಮಗಾಗಿ ಬರೆದಿಟ್ಟಿರುವ ಗ್ರಂಥಗಳಿಂದ ಗೊತ್ತಾಗುತ್ತದೆ. ಆದರೆ ಆ ಪ್ರಾಚೀನ ಗ್ರಂಥಗಳಲ್ಲಿ ಶಾಸ್ತ್ರಗಳು ಬೀಜರೂಪದಲ್ಲಿ,—ಎಂದರೆ ಅತಿ ಸೂಕ್ಷ್ಮ ಸ್ಥಿತಿಯಲ್ಲಿ,—ಇವೆ. ಅವು ದೊಡ್ಡದಾಗಿ ಬೆಳೆದು, ಆಗಾಗ ಹೊಸ ಹೊಸ ಕೊಂಬೆ ರಂಬೆಗಳನ್ನು ತಾಳುತ್ತ, ನಮ್ಮ ಕಾಲದ ವರೆಗೂ ಜೀವಕಳೆಯನ್ನು ಒಂದೇ ರೀತಿ ತೋರಿಸಿಕೊಂಡು ಬಂದಿಲ್ಲ. ನಮ್ಮ ವ್ಯಾಕರಣ, ಅಲಂಕಾರ, ತರ್ಕ, ವೇದಾಂತ, ಈ ಬಗೆಯ ಕೇವಲ ಬುದ್ಧಿಕಾರ್ಯಪ್ರಧಾನವಾದ ಶಾಸ್ತ್ರಗ್ರಂಥಗಳಲ್ಲಿ ಒಂದು ಪಾರಂಪರ್ಯವು—ಎಂದರೆ ಬಿಡುವಿಲ್ಲದೆ, ಭಂಗವಿಲ್ಲದೆ, ಒಂದರ ಹಿಂದೆ ಒಂದು, ಅದರ ಹಿಂದೆ ಮತ್ತೊಂದು, ಆ ಮೇಲೆ ಇನ್ನೊಂದು, ಈ ರೀತಿ ಇರುವ

ಸರಣಿಯು—ಸ್ವಲ್ಪಮಟ್ಟಿಗಾದರೂ ಕಾಣಬರುತ್ತದೆ. ಆದರೆ ಲೋಕಾನುಭವ ಪ್ರಧಾನಗಳಾದ ವಿಜ್ಞಾನಶಾಸ್ತ್ರಗಳಲ್ಲಿ ಅಂಥ ಪಾರಂಪರ್ಯವು ನಮ್ಮಲ್ಲಿ ಅಷ್ಟುಮಾತ್ರವೂ ಕಾಣಬರುವುದಿಲ್ಲ. ಇದಕ್ಕೆ ಅನೇಕ ಕಾರಣಗಳನ್ನು ಊಹಿಸಬಹುದು. ಮುಖ್ಯವಾಗಿ (೧) ನಮ್ಮ ಜನರಿಗೆ ಪರತತ್ತ್ವವಿಷಯಗಳಲ್ಲಿ ಸ್ವಾಭಾವಿಕವಾಗಿ ಆಸಕ್ತಿ ಹೆಚ್ಚು; ಅವರ ಬುದ್ಧಿಯು ಪರಲೋಕದ ವಿಚಾರ ಗಳಲ್ಲಿಯೇ ಹೆಚ್ಚಾಗಿ ಹೋಗುತ್ತಿದ್ದ ಕಾರಣ, ಇಹಲೋಕದ ವಿಚಾರಗಳಿಗೆ ಅವರ ಗಮನವು ತಕ್ಕಷ್ಟು ದೊರೆಯದೆ ಹೋಗಿರ ಬಹುದು. (೨) ಈಗ ಅನೇಕ ಶತಾಬ್ದಗಳಿಂದ ನಮ್ಮ ದೇಶದಲ್ಲಿ ಅನ್ಯದೇಶೀಯರು ಪ್ರಬಲಿಸಿರುವ ಕಾರಣ, ದೇಶೀಯ ಜನ ಜೀವನವು ಸ್ವತಂತ್ರವಾಗಿ ನಡೆಯಲಾರದೆ ಹೋಗಿ, ದೇಶೀಯರು ಸ್ವಂತ ವ್ಯವಸಾಯದಿಂದ ತಮ್ಮ ಲೌಕಿಕಶಾಸ್ತ್ರಗಳನ್ನು ವೃದ್ಧಿ ಪಡಿಸಿಕೊಳ್ಳಬೇಕಾದ ಆವಶ್ಯಕತೆಯೂ ಅದಕ್ಕೆ ತಕ್ಕ ಪ್ರಯೋ ಗಾವಕಾಶವೂ ಸಹ ಇಲ್ಲದೆ ಹೋಗಿರಬಹುದು. ಕಾರಣವಾವು ದಾದರಾಗಲಿ, ಭಾರತೀಯರಲ್ಲಿ ಲೌಕಿಕಶಾಸ್ತ್ರಗಳು ಬೀಜರೂಪ ದಲ್ಲಿ—ಸಂಗ್ರಹವಾಗಿ, ಸೂತ್ರಪ್ರಾಯವಾಗಿ—ಇರುವುವೇ ಹೊರತು, ಪಾಶ್ಚಾತ್ಯರಲ್ಲಿರುವಂತೆ ವಿಸ್ತಾರವಾಗಿ, ಅನುಸ್ಯೂತ ವಾಗಿ ಬೆಳೆದುಕೊಂಡು ಬಂದುವಲ್ಲವೆಂಬುದು ಸ್ಪಷ್ಟವಾಗಿದೆ. ಪಾಶ್ಚಾತ್ಯದೇಶಗಳಲ್ಲಿ ಜನರ ಅಭ್ಯುದಯ ಸಂಪಾದನೋದ್ಯಮವು ಸಂತತವಾಗಿ, ನಿಲುಗಡೆಯಿಲ್ಲದೆ, ದಿನದಿಂದ ದಿನಕ್ಕೆ ವೃದ್ಧಿ ಹೊಂದುತ್ತ ಬಂದಿರುವ ಕಾರಣ, ಅವರ ಲೌಕಿಕ ಶಾಸ್ತ್ರಗಳೂ ಸಂತತವಾಗಿ, ದಿನದಿಂದ ದಿನಕ್ಕೆ ದೊಡ್ಡವಾಗುತ್ತ ಬಂದಿವೆ. ಆದ ಕಾರಣ ಲೌಕಿಕ ಶಾಸ್ತ್ರಭಾಗದಲ್ಲಿ ಭಾರತೀಯರು ಪಾಶ್ಚಾತ್ಯರಿಂದ ಈಗ ಎಷ್ಟೋ ಅಂಶಗಳನ್ನು ಸಂಗ್ರಹಿಸಬೇಕಾಗಿದೆ. ವಿಚಾರ ಮಾಡಿ ನೋಡಿದರೆ, ಎಷ್ಟೋ ಸಂದರ್ಭಗಳಲ್ಲಿ ಪಾಶ್ಚಾತ್ಯರ ಲೌಕಿಕಶಾಸ್ತ್ರ ಸಿದ್ಧಾಂತಗಳು ಭಾರತೀಯರ ಲೌಕಿಕ ಶಾಸ್ತ್ರ ಸೂತ್ರಗಳಿಗೆ ವ್ಯಾಖ್ಯಾನಗಳಂತೆಯೂ ಉದಾಹರಣೆಗಳಂತೆಯೂ

ಕಾಣಬರುತ್ತವೆ. ಆದಕಾರಣ ನಾವು ಲೋಕವ್ಯವಹಾರ ವಿಷಯಗಳಲ್ಲಿ ನಮ್ಮ ಪುರಾತನ ಶಾಸ್ತ್ರಗ್ರಂಥಗಳನ್ನೂ ಪಾಶ್ಚಾತ್ಯರ ಆಧುನಿಕ ಶಾಸ್ತ್ರಗ್ರಂಥಗಳನ್ನೂ ಒಟ್ಟಿಗಿಟ್ಟುಕೊಂಡು ವಿಚಾರ ಮಾಡುವುದು ಬೋಧಪ್ರದವಾಗಿಯೂ ಮನೋರಂಜಕವಾಗಿಯೂ ಇರುತ್ತದೆ. ಮತ್ತು ಆ ತೆರದ ಸಮನ್ವಯವೇ ನಮಗೆ ಇಂದು ಪ್ರಗತಿ ಮಾರ್ಗ.

---

# ೨. ರಾಜ್ಯಶಾಸ್ತ್ರವು ನೀತಿಶಾಸ್ತ್ರದ ಒಂದು ವಿಭಾಗ

ಪ್ರಕೃತ, ಬಗೆಬಗೆಯ ಲೌಕಿಕ ಶಾಸ್ತ್ರಗಳಲ್ಲೆಲ್ಲಾ ರಾಜ್ಯ ಮೀಮಾಂಸಾ ಶಾಸ್ತ್ರವು—ಎಂದರೆ, ಸರಕಾರವೆಂಬ ಏರ್ಪಾಟಿಗೆ ಸಂಬಂಧಪಟ್ಟ ಶಾಸ್ತ್ರವು—ಅತಿ ಮುಖ್ಯವಾದದ್ದೆಂಬುದು ಎಲ್ಲರೂ ಒಪ್ಪಬೇಕಾದ ಮಾತು. ಏಕೆಂದರೆ ಮನುಷ್ಯನ ಯೋಗಕ್ಷೇಮಗಳಿಗೆ ರಾಜ್ಯವ್ಯವಸ್ಥೆಯಿಂದ ಆಗುವಷ್ಟು ಮಟ್ಟಿನ ಸಾಧಕಗಳೂ—ಬಾಧಕಗಳೂ ಸಹ—ಮತ್ತಾವ ಹೊರಗಿನ ಕಾರಣದಿಂದಲೂ ಆಗಲಾರವು. ಮನುಷ್ಯನ ಒಳಗಣ ಅತಿ ಸೂಕ್ಷ್ಮವಾದ ಆತ್ಮಸಾಕ್ಷಿಯೊಂದು, ಹೊರಗಣ ರಾಜದಂಡಭಯವೊಂದು—ಇವೆರಡೇ ಅವನನ್ನು ಧರ್ಮಮಾರ್ಗದಲ್ಲಿ ನಿಲ್ಲಿಸಲು ಇರುವ ಮುಖ್ಯವಾದ ಶಕ್ತಿಗಳು. ನಾವು ಇಹಲೋಕದಲ್ಲಿ ಸುಖವನ್ನು ಪಡೆಯುವುದಕ್ಕೆ ಬೇಕಾದ ವಿದ್ಯೆ ಕುಶಲತೆಗಳನ್ನು ನಮಗೆ ಕಲಿಸಿಕೊಡುವ ಏರ್ಪಾಟೂ, ನಮ್ಮ ಪ್ರಾಣಮಾನವಿತ್ತುಗಳಿಗೆ ಇತರರಿಂದ ಭಂಗಬಾರದ ರೀತಿಯಲ್ಲಿ ನಮ್ಮನ್ನು ಕಾಪಾಡುವ ಏರ್ಪಾಟೂ, ನಾವು ಮನಸ್ವೀ ಪ್ರವರ್ತಿಸಿ ಇತರರಿಗೆ ಹಾನಿಯುಂಟುಮಾಡುವ ಸಂಭವಗಳನ್ನು ಕಡಮೆಮಾಡುವ ಏರ್ಪಾಟೂ ಸಹ ನಡೆಯುವುದು "ಸರಕಾರ" ವೆಂಬ ರಾಜ್ಯವ್ಯವಸ್ಥೆಯಿಂದಲೇ ಅಲ್ಲವೆ? ಮತ್ತು ಇಹಲೋಕದ ಸದ್ವರ್ತನೆಯೇ ಪರಲೋಕದಲ್ಲಿ ನಮ್ಮ ಸದ್ಗತಿಗೆ ಕಾರಣವೆಂದ ಮೇಲೆ, ರಾಜಕೀಯ ವಿಚಾರಗಳು ನಮ್ಮ ದೇಹದ ಸೌಖ್ಯಕ್ಕೆ ಮಾತ್ರವೇ ಸಂಬಂಧಪಟ್ಟುವಾಗದೆ, ನಮ್ಮ ಆಧ್ಯಾತ್ಮಿಕ ಹಿತಕ್ಕೂ ಅತ್ಯಂತವಾಗಿ ಸಂಬಂಧಪಟ್ಟಿರುವುವೆಂಬುದು ಸಿದ್ಧವಾಗುತ್ತದೆ. ಒಂದು ರಾಜ್ಯದಲ್ಲಿಯ ರಾಜನ ಗುಣಾತಿಶಯಗಳು; ಆತನ ಮಂತ್ರಿಮಂಡಲದ ಬುದ್ಧಿಲಕ್ಷಣಗಳು; ಅವರು

ಮಾಡುವ ಕಾನೂನು ಕಟ್ಟುಪಾಡುಗಳು; ಅವರ ಕೈಕೆಳಗೆ ಕೆಲಸ ಮಾಡುವ ಪೊಲೀಸ್, ಮ್ಯಾಜಿಸ್ಟ್ರೇಟ್, ರೆವೆನ್ಯೂ ಮೊದಲಾದ ಇಲಾಖೆಗಳ ಸಿಬ್ಬಂದಿಗಳವರ ರೀತಿ ನೀತಿಗಳು; ಅವರು ಮಾಡಿಸುವ ರಸ್ತೆ, ಕೆರೆ, ಸತ್ರ, ವೈದ್ಯಶಾಲೆ, ಪಾಠಶಾಲೆ ಮೊದಲಾದ ಪ್ರಜೋಪಕಾರಕವಾದ ಕೆಲಸಗಳು—ಇವೇ ಮುಂತಾದ ಸರ್ಕಾರದ ವಿಷಯಗಳಿಗೂ ಆ ರಾಜ್ಯದಲ್ಲಿಯ ಪ್ರಜೆಗಳ ಧರ್ಮ ಕರ್ಮಗಳಿಗೂ ಅತ್ಯಂತ ಗಾಢವಾದ ಅನ್ಯೋನ್ಯ ಸಂಬಂಧವಿರುತ್ತದೆ. ಆದರೆ ಈ ಸಂಬಂಧವನ್ನು ನಾವು ಸಾಮಾನ್ಯವಾಗಿ ಗಮನದಲ್ಲಿಟ್ಟುಕೊಂಡಿರುವುದಿಲ್ಲ. ಬಹುಮಂದಿ ಅದನ್ನು ಮರೆತು "ರಾಜಕೀಯ ವಿಚಾರ ನಮಗೇಕೆ?" ಎನ್ನುವುದುಂಟು. ಆದರೆ ನಿಜಸ್ಥಿತಿಯನ್ನು ವಿಚಾರಮಾಡಿ ನೋಡಿದಲ್ಲಿ, ರಾಜಕೀಯ ವಿಚಾರದ ಸಂಬಂಧವಿಲ್ಲದವರು ಗ್ರಾಮ ಪಟ್ಟಣಗಳಲ್ಲಿ ವಾಸ ಮಾಡುವವರ ಪೈಕಿ ಯಾರೂ ಇರಲಾರರೆಂಬುದು ವ್ಯಕ್ತವಾಗುವುದು. ಮೀನಿಗೆ ನೀರು ಹೇಗೋ, ಪಕ್ಷಿಗೆ ಗಾಳಿ ಹೇಗೋ, ದೇಶನಿವಾಸಿಗೆ ರಾಜ್ಯವೆಂಬುದು ಹಾಗೆ ಎಲ್ಲ ಕಡೆಗಳಲ್ಲಿಯೂ ಆವರಣವಾಗಿರುತ್ತದೆ. ಸಂನ್ಯಾಸಿಯಲ್ಲದ ಪ್ರತಿಯೊಬ್ಬ ಮನುಷ್ಯನೂ ಒಂದು ಬಗೆಯಲ್ಲಲ್ಲದಿದ್ದರೆ ಇನ್ನೊಂದು ಬಗೆಯಲ್ಲಿ, ಒಂದು ಕ್ಷಣವಲ್ಲದಿದ್ದರೆ ಮತ್ತೊಂದು ಕ್ಷಣ, ರಾಜ್ಯವಿಷಯದಲ್ಲಿ ಅತ್ಯಂತ ಸಂಬಂಧವುಳ್ಳವನಾಗಿರುತ್ತಾನೆ. ಆದರೆ ಅನೇಕರು ಇದನ್ನು ಮರೆತಿದ್ದಾರೆ. ರಾಜಕೀಯ ವಿಚಾರವು ಯಾವುದೋ ಒಂದು ಬಗೆಯ ಅಸಂಬದ್ಧ ಪ್ರಲಾಪವೆಂದು ನಮ್ಮಲ್ಲಿ ಹಲಮಂದಿಯ ಭಾವನೆ. ಅದು ಅಥರ್ವಣ ವೇದದಂತೆ ಭಯಾವಹವಾದ ಪ್ರಸಂಗವೆಂದು ಇನ್ನು ಕೆಲಮಂದಿಯ ಭಾವನೆ. ಅದು ಕ್ಷುದ್ರಜನರು ಹೊತ್ತುಕಳೆಯಲು ಹುಡುಕುವ ಪೊಳ್ಳುಹರಟೆಯೆಂದು ಮತ್ತೆ ಕೆಲಮಂದಿಯ ಭಾವನೆ. ಆದರೆ ವಾಸ್ತವಾಂಶವನ್ನು ಬಲ್ಲವರು ರಾಜ್ಯವ್ಯವಸ್ಥೆಯೆಂಬುದು ಮನುಷ್ಯಸಮಾಜದ ಯೋಗಕ್ಷೇಮಗಳ ಮತ್ತು ನಯನೀತಿಗಳ ಏರ್ಪಾಟೇ ಹೊರತು

ಬೇರೆ ಏನೂ ಅಲ್ಲವೆಂದು ಹೇಳುವರು. ರಾಜ್ಯವಿಚಾರವೆಂಬುದಕ್ಕೆ ಇಂಗ್ಲಿಷಿನಲ್ಲಿ ಪ್ರತಿಪದವಾದ "ಪಾಲಿಟಿಕ್ಸ್" ಎಂಬ ಮಾತಿನ ಅರ್ಥವೂ ಹೀಗೆಯೇ ಇರುತ್ತದೆ: ಇಂಗ್ಲಿಷ್ ಡಿಕ್ಷನೆರಿ (ನಿಘಂಟು) ಗಳಲ್ಲಿ ಸಾಮಾನ್ಯವಾಗಿ ಹೀಗಿರುತ್ತದೆ:—

POLITICS = That part of ethics which relates to the regulation and government of a nation or state for the preservation of its safety, peace and prosperity.—*The Concise English Dictionary* by CHARLES ANNANDALE.

(ಒಂದು ಜನಸಮುದಾಯದ ಅಥವಾ, ರಾಷ್ಟ್ರದ, ಕ್ಷೇಮ ಸಮಾಧಾನ ಅಭ್ಯುದಯಗಳನ್ನು ಸಂಪಾದಿಸುವುದಕ್ಕಾಗಿ ಯಾವ ಕಟ್ಟಳೆಯೂ ಅಧಿಕಾರವೂ ಏರ್ಪಟ್ಟಿರುತ್ತವೆಯೋ ಅವುಗಳಿಗೆ ಸಂಬಂಧಪಟ್ಟ ನೀತಿಶಾಸ್ತ್ರ ವಿಭಾಗಕ್ಕೆ "ಪಾಲಿಟಿಕ್ಸ್"—ರಾಜಕೀಯ ಎಂದು ಹೆಸರು.)

ನಮ್ಮಲ್ಲಂತೂ ರಾಜಧರ್ಮವು ಸಾಮಾನ್ಯ ಧರ್ಮಶಾಸ್ತ್ರದ ಒಂದು ಅಂಶ. ಅದಕ್ಕೆ "ನೀತಿ" ಶಾಸ್ತ್ರವೆಂದೂ "ರಾಜನೀತಿ" ಯೆಂದೂ ಹೆಸರುಗಳುಂಟು.

---

# ೨. ರಾಜ್ಯದ ಲಕ್ಷಣ ಪ್ರಯೋಜನಗಳು

## ಭಾರತೀಯರ ಮತ

ರಾಜ್ಯವೆಂಬುದರ ಲಕ್ಷಣ ಪ್ರಯೋಜನಗಳ ವಿಷಯದಲ್ಲಿ ನಮ್ಮ ಪೂರ್ವಿಕರ ಮತವೂ ಪಾಶ್ಚಾತ್ಯರ ಮತವೂ ಬಹುಮಟ್ಟಿಗೆ ಒಂದೇ ತೆರನಾಗಿರುವುದೆಂಬುದು ಎಲ್ಲರಿಗೂ ತಿಳಿದಿರಬೇಕಾದ ಸಂಗತಿ. ಶ್ರೀಮದ್ರಾಮಾಯಣದಲ್ಲಿ, ದಶರಥ ನಿರ್ಯಾಣ ಸಂದರ್ಭದಲ್ಲಿ, ವಾಲ್ಮೀಕಿಋಷಿಯು ಅಯೋಧ್ಯಾಪುರಜನರ ಪರ ವಾಗಿ ಆಡಿಸಿರುವ ಮಾತುಗಳಲ್ಲಿ, "ಅರಾಜಕ"ದಿಂದ—ಎಂದರೆ ರಾಜನಿಲ್ಲದೆ ಹೋಗುವುದರಿಂದ—ಆಗುವ ಕೇಡುಗಳು ಬಗೆಬಗೆ ಯಾಗಿ ಬಣ್ಣಿಸಲ್ಪಟ್ಟಿವೆ. (ಅಯೋಧ್ಯಾಕಾಂಡ, ೬೭ ನೆಯ ಸರ್ಗ):—"ರಾಜನಿಲ್ಲದ ರಾಷ್ಟ್ರವು ವಿನಾಶಹೊಂದುವುದು; ಅಲ್ಲಿ ಕಾಲಕಾಲಕ್ಕೆ ಮಳೆಗರೆಯದು; ಅಲ್ಲಿ ಬೀಜಗಳು ಮೊಳೆ ಯವು; ಅಲ್ಲಿ ತಂದೆಗೆ ಮಗನೂ, ಗಂಡನಿಗೆ ಹೆಂಡತಿಯೂ ಅನುಕೂಲರಾಗರು; ಅಲ್ಲಿ ಪೌರಸಭೆಗಳು ನಡೆಯವು; ಅಲ್ಲಿ ಬ್ರಾಹ್ಮಣರ ಯಜ್ಞ ತಪಸ್ಸುಗಳು ನೆರವೇರವು; ಅಲ್ಲಿ ಉತ್ಸವ ಗಳೂ ಸಮಾಜಗಳೂ ಬೆಳೆಯವು; ಅಲ್ಲಿ ನರ್ತನ ಗಾಯನಾದಿ ಸಂತೋಷಕಾರ್ಯಗಳು ಆಗವು; ಅಲ್ಲಿಯ ಕ್ಷತ್ರಿಯರು ಶೂರ ರಾಗಲಾರರು; ಅಲ್ಲಿಯ ವೈಶ್ಯರು ದೇಶವಿದೇಶಗಳಿಗೆ ಹೋಗಿ ವ್ಯಾಪಾರ ಮಾಡಲಾರರು; ಅಲ್ಲಿ ಗೋವುಗಳೂ ಅಶ್ವಗಳೂ ಅಭಿವರ್ಧಿಸವು; ಅಲ್ಲಿ ಶಾಸ್ತ್ರನೀತಿಗಳು ಪ್ರಬಲಿಸವು; ಅಲ್ಲಿ ಧನವೂ ನಿಲ್ಲದು, ಧರ್ಮವೂ ನಿಲ್ಲದು; ಅಲ್ಲಿ ಮನುಷ್ಯರು ಮತ್ಸ್ಯ ಗಳಂತೆ ಒಬ್ಬರನ್ನೊಬ್ಬರು ಭಕ್ಷಿಸುತ್ತಿರುವರು." ಈ ರೀತಿಯಾಗಿ ನಡೆದ ವಿಲಾಪದ ಕೊನೆಯಲ್ಲಿ ಹೀಗೆ ಹೇಳಿದೆ:—

ರಾಜಾ ಸತ್ಯಂ ಚ ಧರ್ಮಶ್ಚ ರಾಜಾ ಕುಲವತಾಂ ಕುಲಂ |
ರಾಜಾ ಮಾತಾ ಪಿತಾ ಚೈವ ರಾಜಾ ಹಿತಕರೋ ನೃಣಾಂ ||

(ರಾಜನೇ ಸತ್ಯವು ; ರಾಜನೇ ಧರ್ಮವು ; ರಾಜನೇ ಕುಲವಂತರ ಕುಲವು ; ರಾಜನೇ ತಾಯಿ ತಂದೆ ; ರಾಜನೇ ಜನರಿಗೆ ಹಿತಕರನು.)

ಮನುಷ್ಯರ ಅತಿ ಶ್ರೇಷ್ಠವಾದ ಗುಣಸಂಪತ್ತುಗಳೆಲ್ಲಕ್ಕೂ ರಾಜ್ಯವ್ಯವಸ್ಥೆಯೇ ಮೂಲಕಾರಣವೆಂಬುದು ಈ ಪ್ರಸಿದ್ಧ ಶ್ಲೋಕದ ತಾತ್ಪರ್ಯ.

ಶ್ರೀಮನ್ಮಹಾಭಾರತದಲ್ಲಿಯೂ ಇದೇ ಭಾವನೆಯೇ ಪ್ರತಿಪಾದಿತವಾಗಿದೆ. ವ್ಯಾಸರು ಶಾಂತಿಪರ್ವದಲ್ಲಿ ಯುಧಿಷ್ಠಿರನಿಂದ ಭೀಷ್ಮಾಚಾರ್ಯರನ್ನು ಕುರಿತು ರಾಜಧರ್ಮಗಳ ವಿಷಯವಾಗಿ ಪ್ರಶ್ನೆಮಾಡಿಸುವ ಸಂದರ್ಭದಲ್ಲಿ ಹೀಗೆ ಹೇಳಿಸಿರುವರು :—

ರಾಜಧರ್ಮಾನ್ ವಿಶೇಷೇಣ ಕಥಯಸ್ವ ಪಿತಾಮಹ |
ಸರ್ವಸ್ಯ ಜೀವಲೋಕಸ್ಯ ರಾಜಧರ್ಮಃ ಪರಾಯಣಂ ||

(ಓ ತಾತ, ರಾಜಧರ್ಮಗಳನ್ನು ವಿಸ್ತಾರವಾಗಿ ಉಪದೇಶಿಸು ; ಜೀವಕೋಟಿಗಳೆಲ್ಲಕ್ಕೂ ರಾಜಧರ್ಮವೇ ಪರಮಾಧಾರವಲ್ಲವೆ ?)

ತತ್ರ ಚೇತ್ಸಂಪ್ರಮುಹ್ಯೇತ ಧರ್ಮೇ ರಾಜರ್ಷಿಸೇವಿತೇ |
ಲೋಕಸ್ಯ ಸಂಸ್ಥಾ ನ ಭವೇತ್ ಸರ್ವಂ ಚ ವ್ಯಾಕುಲೀ ಭವೇತ್ ||

(ಜನಕಾದಿ ರಾಜರ್ಷಿಗಳು ಸೇವಿಸಿರುವ ಧರ್ಮದ ವಿಷಯದಲ್ಲಿ ರಾಜನು ಉದಾಸೀನನಾದರೆ, ಲೋಕವು ಸರಿಯಾದ ಸ್ಥಿತಿಯಲ್ಲಿರದೆ, ಎಲ್ಲವೂ ಚಿಂತಾ ವ್ಯಾಕುಲವುಳ್ಳದ್ದಾಗುವುದು).

ಉದಯನ್ತಿ ಯಥಾ ಸೂರ್ಯೋ ನಾಶಯತ್ಯಶುಭಂ ತಮಃ |
ರಾಜಧರ್ಮಾಸ್ತಥ್ಯಾಲೋಕ್ಯಾಂ ನಿಕ್ಷಿಪನ್ತ್ಯಶುಭಾಂ ಗತಿಂ ||

(ಸೂರ್ಯನು ಉದಯಿಸಿ ಹೇಗೆ ಅಶುಭವಾದ ಕತ್ತಲೆಯನ್ನು ಹೋಗಲಾಡಿಸುವನೋ, ರಾಜಧರ್ಮಗಳು ಹಾಗೆಯೇ ಮಬ್ಬಾಗಿರುವ ಅಶುಭಗತಿಯನ್ನು ದೂರಮಾಡುತ್ತವೆ.)

ನಮ್ಮ ಧರ್ಮಶಾಸ್ತ್ರಗಳಿಗೆ ಶಿರೋಮಣಿಭೂತವಾದ ಮನುಸ್ಮೃತಿಯಿಂದಲೂ ಇದೇ ಅಭಿಪ್ರಾಯವೇ ವ್ಯಕ್ತವಾಗುತ್ತದೆ:—

ಅರಾಜಕೇ ಹಿ ಲೋಕೇಽಸ್ಮಿನ್ ಸರ್ವತೋ ವಿದ್ರುತೇ ಭಯಾತ್ |
ರಕ್ಷಾರ್ಥಮಸ್ಯ ಸರ್ವಸ್ಯ ರಾಜಾನಮಸೃಜತ್ಪ್ರಭುಃ ||

*　　*　　*　　*

ಮಹತೀ ದೇವತಾ ಹ್ಯೇಷಾ ನರರೂಪೇಣ ತಿಷ್ಠತಿ ||

*　　*　　*　　*

ತಸ್ಯಾರ್ಥೇ ಸರ್ವಭೂತಾನಾಂ ಗೋಪ್ತಾರಂ ಧರ್ಮಮಾತ್ಮಜಂ |
ಬ್ರಹ್ಮತೇಜೋಮಯಂ ದಂಡಮಸೃಜತ್ಪೂರ್ವಮೀಶ್ವರಃ ||

ತಸ್ಯ ಸರ್ವಾಣಿ ಭೂತಾನಿ ಸ್ಥಾವರಾಣಿ ಚರಾಣಿ ಚ |
ಭಯಾದ್ಭೋಗಾಯ ಕಲ್ಪಂತೇ ಸ್ವಧರ್ಮಾನ್ನ ಚಲಂತಿ ಚ ||

(ಲೋಕದಲ್ಲಿ ರಾಜನು ಇನ್ನೂ ಸೃಷ್ಟಿಯಾಗದಿದ್ದ ಕಾಲದಲ್ಲಿ, ಎಲ್ಲರೂ ಒಬ್ಬರ ಭಯದಿಂದೊಬ್ಬರು ದಿಕ್ಕಾಪಾಲಾಗಿ ಓಡಿಹೋಗುತ್ತಿರಲು, ಅವರ ಸಂರಕ್ಷಣೆಗಾಗಿ ಭಗವಂತನು ರಾಜನನ್ನು ಸೃಷ್ಟಿಮಾಡಿದನು. || ಮನುಷ್ಯ ರೂಪದಿಂದಿರುವ ಆತನು ದೊಡ್ಡ ದೇವತೆಯೇ ಅಲ್ಲವೆ? || ಸಕಲ ಭೂತ ಗಳನ್ನೂ ಕಾಪಾಡಬಲ್ಲ, ಧರ್ಮಸ್ವರೂಪವಾದ, ಬ್ರಹ್ಮತೇಜೋಮಯವಾದ ದಂಡವನ್ನು ಆತನಿಗಾಗಿ ಪರಮೇಶ್ವರನು ನಿರ್ಮಿಸಿದನು. || ಆ ರಾಜದಂಡದ ಭಯದಿಂದ ಸ್ಥಿರಚರ ಪ್ರಾಣಿಗಳೆಲ್ಲವೂ ಪರಸ್ಪರ ಪ್ರಯೋಜಕವಾಗಿ ಸ್ವಧರ್ಮದಿಂದ ತಪ್ಪದೆ ನಡೆಯುವುವು.)

ಈ ಮಹರ್ಷಿಮತವನ್ನನುಸರಿಸಿಯೇ ನಮ್ಮ ರಾಜನೀತಿಜ್ಞ ರಲ್ಲಿ ಅತಿ ಪ್ರಖ್ಯಾತನಾದ ಚಾಣಕ್ಯನು ತನ್ನ ಸೂತ್ರಗಳನ್ನು ಈ ರೀತಿ ಪ್ರಾರಂಭಿಸಿರುವನು :—

ಸುಖಸ್ಯ ಮೂಲಂ ಧರ್ಮಃ |
ಧರ್ಮಸ್ಯ ಮೂಲಮರ್ಥಃ |
ಅರ್ಥಸ್ಯ ಮೂಲಂ ರಾಜ್ಯಂ |

(ಜನರ ಸೌಖ್ಯಕ್ಕೆ ಧರ್ಮವೇ ಮೂಲ; ಧರ್ಮಕ್ಕೆ ಅರ್ಥವೇ—ವಿವಿಧ ಲೌಕಿಕ ಸಂಪತ್ತೇ—ಮೂಲ; ಅರ್ಥಕ್ಕೆ ರಾಜ್ಯವ್ಯವಸ್ಥೆಯೇ ಮೂಲ.)

ಹೀಗೆಂದಮೇಲೆ ರಾಜ್ಯಮೀಮಾಂಸೆಯೆಂಬುದು ಮನುಷ್ಯ ಸಮಾಜದ ಇಹಪರ ಹಿತಸಾಧನೆಯ ವಿಚಾರವೇ ಎಂದು ಸಿದ್ಧ ವಾಯಿತಷ್ಟೆ?

## ಪಾಶ್ಚಾತ್ಯರ ಮತ

ಅತ್ತ, ಪಾಶ್ಚಾತ್ಯದೇಶಗಳ ನೀತಿತತ್ತ್ವಜ್ಞರ ಗ್ರಂಥಗಳನ್ನು ನೋಡಿದರೂ ಮೇಲೆ ಕಂಡ ಅಭಿಪ್ರಾಯಗಳೇ—ಎಂದರೆ (೧) ರಾಜ್ಯವೆಂಬ ಏರ್ಪಾಟು ಸ್ವಭಾವಸಿದ್ಧವಾದದ್ದು, ಅಥವಾ ಮನುವು ಹೇಳಿರುವಂತೆ ಭಗವಂತನಿಂದಲೇ (ಅರ್ಥಾತ್, ಭಗವಂತನ ಪ್ರೇರಣೆಯಿಂದಲೇ) ಉಂಟಾದದ್ದು; (೨) ಮನುಷ್ಯ ಸಮಾಜವು ಸುಸ್ಥಿತಿಯಲ್ಲಿ ನಿಲ್ಲುವಂತೆ, ಎಂದರೆ ಎಲ್ಲರೂ ಸ್ವಧರ್ಮಗಳಲ್ಲಿರುವಂತೆ, ಮಾಡುವುದಕ್ಕೆ ರಾಜ್ಯವ್ಯವಸ್ಥೆಯು ಅತ್ಯಂತಾವಶ್ಯಕವಾದದ್ದು ಎಂಬ ಸಿದ್ಧಾಂತಗಳೇ—ಹೊರಪಡುತ್ತವೆಂದು ತೋರಿಸಲು ಅನೇಕ ಉದಾಹರಣೆಗಳನ್ನು ಕೊಡಬಹುದು. ಸ್ಥಳಸಂಕೋಚಕಾರಣದಿಂದ ಇಲ್ಲಿ ಅತಿ ಪ್ರಸಿದ್ಧರಾದ ಇಬ್ಬರ ವಾಕ್ಯಗಳನ್ನು ಮಾತ್ರ ಕೊಡುವೆವು. ಕ್ರಿಸ್ತಪೂರ್ವ ೩೮೪-೩೨೨ರಲ್ಲಿ ಗ್ರೀಸ್ ದೇಶದಲ್ಲಿ ಬಾಳಿದ ಅರಿಸ್ಟೋಟಲ್[1] (Aristotle) ಎಂಬ ಪ್ರಸಿದ್ಧ ತತ್ತ್ವವಿಚಾರಕನು ಹೀಗೆ ಬರೆದನು :—

ಪ್ರತಿಯೊಂದು ರಾಜ್ಯವೂ ಒಂದು ಬಗೆಯ ಮಾನವ ಸಮಾಜವಾಗಿರುತ್ತದೆ. ಪ್ರತಿ ಸಮಾಜವೂ ಯಾವುದೋ ಒಂದು ಪ್ರಯೋಜನ (ಒಳ್ಳೆಯದ)ಕ್ಕಾಗಿ ಏರ್ಪಟ್ಟಿರುತ್ತದೆ; ಏಕೆಂದರೆ, ಮನುಷ್ಯರು ಮಾಡುವ ಕೆಲಸಗಳೆಲ್ಲವೂ ಯಾವಾಗಲೂ ಯಾವುದಾದರೂ ತಮಗೆ ಹಿತವೆಂದು ತೋರಿದ್ದನ್ನು ಸಾಧಿಸುವುದಕ್ಕೋಸ್ಕರವಾಗಿಯೇ ಆಗಿರುತ್ತವೆ. ಆದರೆ ಎಲ್ಲ ಸಮಾಜಗಳೂ ಯಾವುದೋ ಒಂದು ಪ್ರಯೋಜನವನ್ನು ಉದ್ದೇಶಿಸಿದರೆ, ಎಲ್ಲಕ್ಕಿಂತ ದೊಡ್ಡದಾಗಿ ಎಲ್ಲವನ್ನೂ ಒಳಗೊಂಡಿರುವ ರಾಜಕೀಯ ಸಮಾಜವು, ಅಥವಾ ರಾಜ್ಯವು, ಎಲ್ಲಕ್ಕಿಂತ ಹೆಚ್ಚಾಗಿ ಅತ್ಯಂತ ದೊಡ್ಡದಾದ ಪ್ರಯೋಜನವನ್ನೇ ಉದ್ದೇಶಿಸಿರುತ್ತದೆ.

---

[1] ಹಿಂದೂ ದೇವತೆಗಳಲ್ಲಿ ಗಣಪತಿಯು ಹೇಗೆಯೋ ರಾಜ್ಯಮೀಮಾಂಸಕರಲ್ಲಿ ಅರಿಸ್ಟೋಟಲನು ಹಾಗೆ ಪ್ರಥಮಪೂಜನೀಯನೆಂದು ಸರ್ ಫ್ರೆಡರಿಕ್ ಪೋಲಕ್ ಎಂಬ ರಾಜ್ಯಶಾಸ್ತ್ರ-ವ್ಯವಹಾರಶಾಸ್ತ್ರನಿಪುಣನು ಬರೆದಿರುತ್ತಾನೆ.

ಅನೇಕ ಕುಟುಂಬಗಳು ಒಟ್ಟುಗೂಡಿ, ಆ ಕೂಟದ ಉದ್ದೇಶವು ಅವುಗಳ ದಿನಚರಿಗೆ ಬೇಕಾದ ಪದಾರ್ಥಗಳನ್ನೊದಗಿಸುವುದಕ್ಕಿಂತ ಹೆಚ್ಚಿನದಾಗಿದ್ದರೆ, ಆಗ ಅದು ಗ್ರಾಮವೆನಿಸುತ್ತದೆ. . . . ಕೆಲವು ಗ್ರಾಮಗಳು ಒಂದು ಸಮಾಜವಾಗಿ ಸೇರಿ, ಆ ಸಮಾಜವು ಆ ಗ್ರಾಮಗಳಿಗೆ ಬೇಕಾದುದನ್ನೆಲ್ಲ ಒಟ್ಟಿಗೆ ಅವವುಗಳಿಂದಲೇ ಒದಗಿಸಿಕೊಡುವಷ್ಟು ದೊಡ್ಡದೂ ಅನುಕೂಲವುಳ್ಳದೂ ಆಗಿದ್ದರೆ, ಆಗ ರಾಜ್ಯವು ಹುಟ್ಟುತ್ತದೆ. ರಾಜ್ಯ ಹುಟ್ಟುವುದು ಮಾನವರ ಜೀವನವು ಕೇವಲ ಸಾಧ್ಯವಾಗುವಂತೆ ಮಾಡುವುದಕ್ಕೋಸ್ಕರ; ಅದು ಶಾಶ್ವತವಾಗಿ ನಿಂತಿರುವುದು ಆ ಜೀವನವನ್ನು (ಹಿತಕರವನ್ನಾಗಿ) ಒಳ್ಳೆಯದನ್ನಾಗಿ ಮಾಡುವುದಕ್ಕೋಸ್ಕರ.

ರಾಜ್ಯವು ಪ್ರಕೃತಿಯಿಂದ ಉಂಟಾದ ಕಾರ್ಯ; ಮನುಷ್ಯನು ಸ್ವಾಭಾವಿಕವಾಗಿ ರಾಜಕೀಯಪ್ರಾಣಿ. ಯಾರು ಆಕಸ್ಮಿಕವಾಗಿ ಮಾತ್ರ ಅಲ್ಲದೆ, ಸ್ವಭಾವದಿಂದ ರಾಜ್ಯವನ್ನು ಬಿಟ್ಟಿರುವನೋ ಅವನು ಮನುಷ್ಯ ಜಾತಿಗೆ ಮೇಲಿನವನಾಗಿಯಾಗಲಿ ಕೆಳಗಿನವನಾಗಿಯಾಗಲಿ ಇರಬೇಕು. ಹೋಮರ್ ಮಹಾ ಕವಿಯಿಂದ ದೂಷಿಸಲ್ಪಟ್ಟಿರುವವನು ಅಂಥಾ ಕುಲವಿಲ್ಲದ, ಕಟ್ಟಳೆಯಿಲ್ಲದ, ಮನೆಯಿಲ್ಲದ ತೊಂಡಾಡಿ . . . ಸಮಾಜದಲ್ಲಿ ಬದುಕಬೇಕೆಂಬ ಪ್ರವೃತ್ತಿಯನ್ನು ಪ್ರಕೃತಿಯೇ ಎಲ್ಲ ಮನುಷ್ಯರಲ್ಲಿಯೂ ನೆಟ್ಟಿರುತ್ತದೆ. ಆದರೂ (ಹೀಗೆ ಸಹಜವಾಗಿಯೇ ಮನುಷ್ಯರ ಹೃದಯದೊಳಗಿರುವ ಪ್ರವೃತ್ತಿಗೆ ಹೊರಗಡೆ ತಕ್ಕ ಸೌಕರ್ಯವನ್ನು ಕಲ್ಪಿಸಿ) ಯಾರು ರಾಜ್ಯವನ್ನು ಮೊದಲು ಸ್ಥಾಪಿಸಿದನೋ ಆತನೇ ಲೋಕಕ್ಕೆ ಪರಮೋಪಕಾರಿ. ಏಕೆಂದರೆ ಮನುಷ್ಯನು ಗುಣಸಂಪನ್ನನಾದಾಗ ಪ್ರಾಣಿಗಳಲ್ಲೆಲ್ಲ ಉತ್ತಮನೆಂದೆನಿಸಿಕೊಂಡರೂ, ನ್ಯಾಯವೂ ಧರ್ಮವೂ ಇಲ್ಲದಾಗ ಅವನು ಎಲ್ಲಕ್ಕಿಂತ ನೀಚನು; ಅದು ಹೇಗೆಂದರೆ ಅನ್ಯಾಯಕಾರಿಯು ಆಯುಧದಿಂದ ಕೂಡಿದವನಾದರೆ ಮತ್ತಷ್ಟು ಅಪಾಯಕರನಾಗುವನು. ಮನುಷ್ಯನು ಆಜನ್ಮತಃ ಬುದ್ಧಿಯೆಂಬ ಮತ್ತು ನೀತಿಸ್ವಾತಂತ್ರ್ಯವೆಂಬ ಆಯುಧಗಳಿಂದ ಕೂಡಿದವನಾದಕಾರಣ ಅವುಗಳನ್ನು ಅವನು ಅತಿ ಹೇಯವಾದ ಉದ್ದೇಶಗಳಿಗಾಗಿ ಉಪಯೋಗಿಸಬಹುದು. ಹೀಗಿರುವುದರಿಂದ ಮನುಷ್ಯನಲ್ಲಿ ಸೌಜನ್ಯವಿಲ್ಲದಿದ್ದರೆ, ಪ್ರಾಣಿಗಳಲ್ಲೆಲ್ಲಾ ಅವನೇ ಅತ್ಯಂತ ಅಧಮನೂ ಅಸಭ್ಯನೂ ದುರಾಶಾದೂಷಿತನೂ ಆಗುವನು. ನ್ಯಾಯವು ಅಥವಾ ಧರ್ಮವು ಮನುಷ್ಯರನ್ನು ರಾಜ್ಯಗಳಾಗಿ ಕಟ್ಟುತ್ತದೆ. ನ್ಯಾಯಪರಿಪಾಲನೆಯೇ—ಎಂದರೆ

ನ್ಯಾಯಾನ್ಯಾಯ ವಿಮರ್ಶೆಯೇ—ರಾಜಕೀಯ ಸಮಾಜ (ರಾಜ್ಯ)ದಲ್ಲಿ ಒಂದು ವ್ಯವಸ್ಥೆಯನ್ನುಂಟುಮಾಡತಕ್ಕ ತತ್ತ್ವ.[2]

ರಾಜನೀತಿವಿಶಾರದರಲ್ಲಿ ವಿಶಾಲಮತಿಯೆಂದು ವಿಖ್ಯಾತನಾದ ಎಡ್ಮಂಡ್ ಬರ್ಕ್ (Edmund Burke) ಎಂಬ ಮಹನೀಯನು ಹೀಗೆ ಹೇಳಿರುತ್ತಾನೆ:—

ರಾಜ್ಯವು [ರಾಜ-ಪ್ರಜೆಗಳು ಮಾಡಿಕೊಂಡಿರುವ] ಒಂದು ಬಗೆಯ ಒಪ್ಪಂದ (ಕಾಂಟ್ರ್ಯಾಕ್ಟ್) ಎಂಬುದೇನೋ ಸರಿ. ಆದರೆ ತಾತ್ಕಾಲಿಕ ಪ್ರಯೋಜನಕ್ಕಾಗಿ ಮಾತ್ರ ಮಾಡಿಕೊಂಡಿರುವ ಸಣ್ಣ ಸಣ್ಣ ಒಪ್ಪಂದಗಳನ್ನು

---

[2] Every State is a community of some kind, and every community is established with a view to some good; for mankind always act in order to obtain that which they think good. But, if all communities aim at some good, the State or political community, which is the highest of all, and which embraces all the rest, aims, and in a greater degree than any other, at the highest good.

When several families are united, and the association aims at something more than the supply of daily needs, then comes into existence the village . . . When several villages are united in a single community, perfect and large enough to be nearly or quite self-sufficing, the State comes into existence, *originating in the bare needs of life, and continuing in existence for the sake of a good life.*

Hence it is evident that the State is a creation of nature, and that man is by nature a political animal. And he who by nature and not by mere accident is without a State, is either above humanity, or below it; he is the "Tribeless, lawless, hearthless one," whom Homer denounces . . . . A social instinct is implanted in all men by nature, and yet he who first founded the State was the greatest of benefactors. For man, when perfected, is the best of animals; but, when separated from law and justice, he is the worst of all; since armed injustice is the more dangerous, and he is equipped at birth with the arms of intelligence and with moral qualities which he may use for the worst ends. Wherefore, if he have not virtue, he is the most unholy and most savage of animals, and the most full of lust and gluttony. But justice is the bond of men in states, and the administration of justice, which is the determination of what is just, is the principle of order in political society."—ARISTOTLE, Translated by JOWETT,

See also ERNEST BARKER.

ಬೇಕಾದಾಗ ರದ್ದು ಮಾಡಿಕೊಳ್ಳಲಾಗುವುದು ; ಈ ರಾಜ್ಯವೆಂಬುದಾದರೋ, ಮೆಣಸು, ಕಾಫಿ, ಬಟ್ಟೆ, ಹೊಗೆಯಸೊಪ್ಪು—ಈ ಜಾತಿಯ ಚಿಲ್ಲರೆಯ ಜಿನಸಿಗಳ ವ್ಯಾಪಾರಕ್ಕೋಸ್ಕರ ಸ್ವಲ್ಪ ದಿನಗಳ ಮಟ್ಟಿಗಾಗಿ ಆದ ಪಾಲುಗಾರಿಕೆಯ ಒಪ್ಪಂದಕ್ಕಿಂತ ಮೇಲಾದದ್ದೇನೂ ಅಲ್ಲವೆಂದೂ, ಪಾಲುದಾರರು ಇಷ್ಟಬಂದಂತೆ ಅದನ್ನು ವಜಾಮಾಡಬಹುದೆಂದೂ ಭಾವಿಸಲಾಗದು. ಅದನ್ನು (ರಾಜ್ಯವನ್ನು) ಹೆಚ್ಚು ಗೌರವದಿಂದ ಕಾಣಬೇಕು ; ಏಕೆಂದರೆ, ಅದು ಕೆಲವು ದಿನವಿದ್ದು ನಶಿಸುವ ಪಶುಜೀವನಕ್ಕೆ ಬೇಕಾದ ವಸ್ತುಗಳಿಗೆ ಮಾತ್ರ ಸಂಬಂಧಪಟ್ಟ ಪಾಲುಗಾರಿಕೆಯಲ್ಲ. ಅದು ಎಲ್ಲ ಜ್ಞಾನದಲ್ಲಿಯೂ ಪಾಲುಗಾರಿಕೆ ; ಎಲ್ಲ ಕಲೆಗಳಲ್ಲಿಯೂ ಪಾಲುಗಾರಿಕೆ ; ಎಲ್ಲ ಸೌಜನ್ಯದಲ್ಲಿಯೂ ಎಲ್ಲ ಸಂಪನ್ನತೆಯಲ್ಲಿಯೂ ಪಾಲುಗಾರಿಕೆ. ಇಂತಹ ಪಾಲುಗಾರಿಕೆಯ ಉದ್ದೇಶಗಳು ಕೆಲವು ತಲೆಮೊರೆಗಳು ಕಳೆದರೂ ಸಂಪೂರ್ಣವಾಗಿ ನೆರವೇರದಿರುವುದರಿಂದ, ಅದು ಬದುಕಿರತಕ್ಕವರಿಗೆ ಮಾತ್ರವೇ ಸಂಬಂಧಪಟ್ಟ ಪಾಲುಗಾರಿಕೆಯಲ್ಲ ; ಅದು ಬದುಕಿರತಕ್ಕವರಿಗೂ, ಸತ್ತವರಿಗೂ, ಇನ್ನೂ ಹುಟ್ಟಬೇಕಾಗಿರುವವರಿಗೂ ಸಹ ಸೇರಿದ ಪಾಲುಗಾರಿಕೆಯಾಗಿರುತ್ತದೆ. ಪ್ರತಿಯೊಂದು ರಾಜ್ಯವೆಂಬ ಒಪ್ಪಂದವೂ ಅಖಿಲ ಮಾನವ ಸಮಾಜವೆಂಬ ಪ್ರಕೃತಿಸಿದ್ಧವಾದ ಮಹಾ ಒಡಂಬಡಿಕೆಯ ವಾಕ್ಯದಲ್ಲಿ,—ಎಲ್ಲ ಭೌತಿಕ ಮತ್ತು ಆಧ್ಯಾತ್ಮಿಕ ತತ್ತ್ವಗಳನ್ನೂ ತಮ್ಮ ತಮ್ಮ ಸ್ಥಾನಗಳಲ್ಲಿ ನಿಲ್ಲಿಸತಕ್ಕ ಅನುಲ್ಲಂಘ್ಯವಾದ ಯಾವ ದಿವ್ಯಾಜ್ಞೆಯುಂಟೋ ಅದಕ್ಕನುಸಾರವಾದೊಂದು ಸ್ಥಿರಸಮ್ಮತಿಯಂತೆ—ಕೀಳುತೆರದವರನ್ನು ಮೇಲು ತೆರದವರೊಡನೆಯೂ, ದೃಶ್ಯವಾದುದನ್ನು ಅದೃಶ್ಯವಾದುದರೊಡನೆಯೂ ಕೂಡಿಸುವ,—ಒಂದು ಉಪವಾಕ್ಯ ಮಾತ್ರವಾಗಿರುತ್ತದೆ. ಯಾರು ಅತ್ಯಂತೋನ್ನತವಾದ ಪರಮಧರ್ಮಕ್ಕೆ ವಶರಾಗಿ ಈ ರಾಜ್ಯವೆಂಬ ಕಟ್ಟಳೆಗೆ ವಿಧೇಯರಾಗಿರಬೇಕಾಗಿದೆಯೋ ಅಂಥಾ ಪ್ರಜಾಜನರ ಇಷ್ಟಕ್ಕೆ ಈ ಮೂಲ ಕಟ್ಟಳೆಯು ಒಳಪಡತಕ್ಕುದಲ್ಲ.[3]

---

[3] Society is indeed a contract. Subordinate contracts for objects of mere occasional interest may be dissolved at pleasure; but the State ought not to be considered as nothing better than a partnership agreement in a trade of pepper and coffee, calico or tobacco, or some other such low concern, to be taken up for a little temporary interest, and to be dissolved by the fancy of the parties. It is to be looked on with other reverence; because it is not a partnership in things subservient only to the gross animal existence of a temporary and perishable nature. It is a

ಇದರಿಂದ “ ಪಾಲಿಟಿಕ್ಸ್ ” ಅಥವಾ ರಾಜ್ಯಮೀಮಾಂಸಾ ಶಾಸ್ತ್ರವು ಎಷ್ಟು ಮಹಿಮೆಯುಳ್ಳದ್ದು,—ಅದನ್ನು ಪ್ರತಿಯೊಬ್ಬ ಮನುಷ್ಯನೂ ಸಾಧ್ಯವಾದಷ್ಟು ಚೆನ್ನಾಗಿ ತಿಳಿದುಕೊಳ್ಳುವುದು ದೇಶಾಭ್ಯುದಯಕ್ಕೆ ಎಷ್ಟು ವಿಶೇಷ ಆವಶ್ಯಕ—ಎಂಬುದು ಎಲ್ಲರ ಮನಸ್ಸಿಗೂ ತಾನಾಗಿ ತೋರಬಂದೀತು.

## ರಾಜ್ಯಜ್ಞಾನದ ಆವಶ್ಯಕತೆ

ನಮ್ಮ ದೇಶದಲ್ಲಿ ರಾಜಕೀಯ ವಿಷಯಗಳಲ್ಲಿ ಹಿಂದೆ ಸಾಮಾನ್ಯಜನರಿಗಿದ್ದ ಅನಾದರವು ಈಚೀಚೆಗೆ ಕಡಮೆಯಾಗುತ್ತಿದೆಯೆಂಬುದು, ಮೇಲೆ ವಿವರಿಸಿದ ಕಾರಣಗಳಿಗಾಗಿ, ಸಂತೋಷವನ್ನುಂಟುಮಾಡತಕ್ಕ ಸಂಗತಿ. ಈಗ ಜನರಿಗೆ ಎಲ್ಲೆಲ್ಲೂ ದೇಶದ ಯೋಗಕ್ಷೇಮಗಳಿಗೆ ಸಂಬಂಧಪಟ್ಟ ವಿಷಯಗಳಲ್ಲಿ ಆಸಕ್ತಿಯೂ ರಾಜ್ಯಕಾರ್ಯಗಳಿಗೆ ತಾವೂ ಕೈಹಾಕಿ ಸರ್ಕಾರವನ್ನು ಸರಿಪಡಿಸಬೇಕೆಂಬ ಆಶೆಯೂ ಹೆಚ್ಚುತ್ತಿವೆ. ಅದಕ್ಕೆ ತಕ್ಕಂತೆ ರಾಜ್ಯಸಂಸ್ಥೆಯನ್ನು ಮಾರ್ಪಡಿಸಿ, ಪ್ರಜಾಪ್ರತಿನಿಧಿಗಳಿಗೆ ರಾಜಕೀಯ ವಿಷಯಗಳಲ್ಲಿ ಹೆಚ್ಚು ಅಧಿಕಾರಕೊಟ್ಟು, ಸರ್ಕಾರದ ಆಡಳಿತಗಳು ಕೂಡಿದಮಟ್ಟಿಗೂ ಪ್ರಜಾಭಿಪ್ರಾಯಕ್ಕೆ ಅನುಸಾರವಾಗಿರುವಂತೆ ಮಾಡಬೇಕೆಂದು ನಮ್ಮ

---

partnership in all science; a partnership in all art; a partnership in every virtue, and in all perfection. As the ends of such a partnership cannot be obtained in many generations, it becomes a partnership not only between those who are living, but between those who are living, those who are dead, and those who are to be born. Each contract of each particular State is but a clause in the great primeval contract of eternal society, linking the lower with the higher natures, connecting the visible and invisible world, according to a fixed compact sanctioned by the inviolable oath which holds all physical and all moral natures each in their appointed place. This law is not subject to the will of those who by an obligation above them, and infinitely superior, are bound to submit their will to that law.—EDMUND BURKE, *Reflections*.

ಭರತ ಖಂಡದಲ್ಲಿ ಎಲ್ಲೆಲ್ಲೂ ಪ್ರಯತ್ನ ನಡೆದು ಫಲಿಸಿದೆ. ಆದರೆ ಪ್ರಜೆಗಳು ಅಧಿಕಾರಸಂಪಾದನೆಗಾಗಿ ತೋರಿದಷ್ಟು ಉತ್ಸಾಹವನ್ನು ಜ್ಞಾನಸಂಪಾದನೆಗಾಗಿಯೂ ತೋರಿದರಲ್ಲವೆ ಅವರ ಅಧಿಕಾರವು ಸಾರ್ಥವಾಗುವುದು? ರಾಜ್ಯಸಂಸ್ಥೆಯ ಮರ್ಮವಾವುದು, ಅದರ ರಚನೆ ಹೇಗಿರಬೇಕು, ಅದರ ಕಾರ್ಯ ರೀತಿ ಎಂಥಾದ್ದು ಎಂಬೀ ರಾಜ್ಯಮೀಮಾಂಸಾಶಾಸ್ತ್ರದ ತತ್ತ್ವಗಳನ್ನು ಅರಿಯದವರಿಗೆ ಅಧಿಕಾರ ದೊರೆತರೆ, ಅದರಿಂದ ಉಪಕಾರವಾಗುವುದಕ್ಕೆ ಪ್ರತಿಯಾಗಿ, ಅಪಕಾರವೇ ಆದೀತು. ಕತ್ತಿಯು ಸಾಧನೆ ಮಾಡಿರುವವನಿಗೆ ಕತ್ತಿಯಿಂದ ಪ್ರಯೋಜನವುಂಟು; ಆ ಸಾಧನೆಯನ್ನರಿಯದವನಿಗೆ ಆ ಆಯುಧದಿಂದ ಅಪಾಯವೇ ಆಗಬಹುದಲ್ಲವೆ? ಪ್ರಜೆಗಳಲ್ಲಿ ರಾಜಕೀಯಾಧಿಕಾರದೊಡನೆ ರಾಜಕೀಯ ಜ್ಞಾನವು ಸೇರಿರದಿದ್ದರೆ, ಅವರಿಂದ ದೇಶಕ್ಕೆ ಕ್ಷೇಮವಾದೀತೆಂಬ ಭರವಸೆ ತೋರಲಾರದು. ಹೀಗಿರುವುದರಿಂದ ಈ ಲೇಖನದಲ್ಲಿ ಪ್ರಕೃತೋಪಯುಕ್ತವಾಗುವ ಮಟ್ಟಿಗೆ,—ಎಂದರೆ ಸೂಕ್ಷ್ಮವಾದ ಶಾಸ್ತ್ರಪ್ರಸಂಗಗಳಿಗೂ ಐತಿಹಾಸಿಕಾಂಶಗಳಿಗೂ ವಿಶೇಷವಾಗಿ ಹೋಗದೆ,—ರಾಜ್ಯಮೀಮಾಂಸಾಶಾಸ್ತ್ರದ ಮುಖ್ಯಾಂಶಗಳನ್ನು ಸಂಗ್ರಹವಾಗಿ ಮಹಾಜನರಿಗೆ ಅರಿಕೆಮಾಡಬೇಕೆಂದು ಪ್ರಯತ್ನಿಸಿದೆ.

"ರಾಜ್ಯಮೀಮಾಂಸಾ"ಶಾಸ್ತ್ರವು ನಮ್ಮ ಪೂರ್ವಿಕರಲ್ಲಿ ಇಲ್ಲದೆಯೇ ಹೋಗಿರಲಿಲ್ಲವೆಂಬುದನ್ನು ಪ್ರಾರಂಭದಲ್ಲಿಯೇ ಸೂಚಿಸಿದ್ದೇವೆ. ಅವರು ಅದನ್ನು "ಅರ್ಥಶಾಸ್ತ್ರ," "ರಾಜಧರ್ಮ," "ದಂಡನೀತಿ"—ಎಂಬ ಹೆಸರುಗಳಿಂದ ಕರೆಯುತ್ತಿದ್ದರು. ವೇದದಲ್ಲಿಯೂ, ಪುರಾಣೇತಿಹಾಸಗಳಲ್ಲಿಯೂ ರಾಜಧರ್ಮವಿಷಯಕವಾದ ವಚನಗಳು ಹೇರಳವಾಗಿವೆ. ಅವುಗಳ ಜೊತೆಗೆ ಬೃಹಸ್ಪತಿ, ಶುಕ್ರ, ಕಾಮಂದಕ, ಕೌಟಿಲ್ಯ ಅಥವಾ ಚಾಣಕ್ಯ—ಇವರು ಪ್ರತ್ಯೇಕಗಳಾದ ರಾಜನೀತಿಯ ಗ್ರಂಥಗಳನ್ನು ಆಮೂಲಾಗ್ರ

ವಾಗಿ ಬರೆದಿದ್ದಾರೆ. ಆದರೆ ಮೇಲೆಯೇ ಹೇಳಿರುವಂತೆ, ಆ ಶಾಸ್ತ್ರವು ಅವಿಚ್ಛಿನ್ನವಾಗಿ ಲೋಕವ್ಯವಹಾರವನ್ನವಲಂಬಿಸಿ ಕೊಂಡು ನಮ್ಮ ಕಾಲದ ವರೆಗೂ ದಿನೇ ದಿನೇ ಬೆಳೆದುಬಂದಿರುವುದಲ್ಲ. ಪಾಶ್ಚಾತ್ಯರಲ್ಲಿ ಹೀಗಾಗದೆ, ರಾಜ್ಯಮೀಮಾಂಸೆಯು ಲೋಕಪರಿಸ್ಥಿತಿಯನ್ನನುಸರಿಸಿಕೊಂಡು ಇದುವರೆಗೂ ಬೆಳೆಯುತ್ತ ಬಂದಿದೆ. ಆ ಮೀಮಾಂಸೆಗೆ ಸಂಬಂಧಪಟ್ಟ ಪರೀಕ್ಷೆಗಳೂ ಚರ್ಚೆಗಳೂ ಇನ್ನೂ ಈ ಹೊತ್ತಿನ ವರೆಗೂ ನಡೆಯುತ್ತಲೇ ಇವೆ. ಈ ಪ್ರಕಾರವಾಗಿ ಜೀವಕಳೆಯಿಂದೊಡಗೂಡಿರುವ ಪಾಶ್ಚಾತ್ಯ ರಾಜ್ಯಮೀಮಾಂಸೆಯ ಬೆಲೆಯು ನಮಗೆ ಈಗ ಎಣಿಸುವುದಕ್ಕಾಗಲಾರದಷ್ಟು ದೊಡ್ಡದಾಗಿದೆ. ಪಾಶ್ಚಾತ್ಯರಲ್ಲಿ ಎಷ್ಟೋ ಭಾಗಗಳಲ್ಲಿ ಮತಭೇದಗಳೂ ಅವಾಂತರಭೇದಗಳೂ ಇದ್ದರೂ, ಈ ಲೇಖನದಲ್ಲಿ ನಾವು ಕೂಡಿದ ಮಟ್ಟಿಗೂ ಅವರ ಮುಖ್ಯಾಭಿಪ್ರಾಯಗಳನ್ನು ಸಂಗ್ರಹವಾಗಿ ತೆಗೆದುಕೊಂಡು, ನಮ್ಮ ಶಾಸ್ತ್ರಕಾರರ ಅಭಿಪ್ರಾಯಗಳನ್ನು ಅವುಗಳೊಡನೆ ಹೋಲಿಸಿ ತೋರಿಸಬೇಕೆಂದಿರುವೆವು.

---

# ೪. ರಾಜ್ಯದ ಸ್ವರೂಪ

"ರಾಜ್ಯ"ವೆಂಬ ಪದವನ್ನು ನಾವು ಸಾಮಾನ್ಯವಾಗಿ ಅನೇಕಾರ್ಥಗಳಲ್ಲಿ ಉಪಯೋಗಿಸುತ್ತೇವೆ. (೧) ಒಂದು ದೇಶ, ಅಥವಾ ಭೂಭಾಗ, (೨) ಒಂದು ದೇಶದಲ್ಲಿರುವ ಜನಸಮುದಾಯ, (೩) ಒಂದು ಜನಸಮುದಾಯಕ್ಕೆ ಪ್ರಭುವೆನ್ನಿಸಿಕೊಂಡಿರುವವನ ಪದವಿ, ಅಥವಾ ಅಧಿಕಾರ, ಅಥವಾ ಕಾರ್ಯ—ಈ ನಾನಾ ಅರ್ಥಗಳಲ್ಲಿ "ರಾಜ್ಯ"ವೆಂಬ ಪದವು ಪ್ರಯೋಗವಾಗುತ್ತಿದೆ. ಆದರೆ ನಮ್ಮ ಪ್ರಸ್ತುತ ಪ್ರಸಂಗದಲ್ಲಿ ಸ್ಥೂಲವಾಗಿ "ರಾಜ್ಯ"ವೆಂದರೆ "ಒಂದೇ ಕಟ್ಟುಪಾಡಿಗೆ ಒಳಪಟ್ಟಿರುವಂಥ ಜನರ ಒಂದು ಮಹಾಸಮಾಜ" ಎಂದಿಟ್ಟುಕೊಳ್ಳಬಹುದು. ಅಂಥ ಸಮಾಜವು ಯಾವ ಕಟ್ಟುಪಾಡನ್ನು ಇಟ್ಟುಕೊಂಡಿರುವುದೋ ಅದಕ್ಕನುಸಾರವಾದ—ಎಂದರೆ ಆ ಕಟ್ಟುಪಾಡನ್ನು ಆ ಸಮಾಜವು ಅಂಗೀಕರಿಸಿರುವುದರಿಂದ ಹುಟ್ಟುವ, ಮತ್ತು ಅಂಥ ಕಟ್ಟುಪಾಡನ್ನು ನಿಲ್ಲಿಸುವುದಕ್ಕೆ ಆವಶ್ಯಕವಾದ—ಸಮಾಜಶಕ್ತಿಗೂ "ರಾಜ್ಯ"ವೆಂಬ ಪದವು ರೂಢಿಜನ್ಯವಾಗಿ ಪ್ರಯುಕ್ತವಾಗಬಹುದು. ಆ ಶಕ್ತಿಯ ಕರಣವೇ ಸರಕಾರ (ಗವರ್ನ್ಮೆಂಟ್). "ರಾಜ್ಯ"ವೆಂಬುದಕ್ಕೆ ಸರಿಯಾದ "ಸ್ಟೇಟ್" (State) ಎಂಬ ಇಂಗ್ಲಿಷ್ ಪದಕ್ಕೂ ಸಮಾಜ, ಸಮಾಜಾಧಿಕಾರ ಎಂಬ ಎರಡು ಅರ್ಥಗಳೂ ರೂಢಿಯಲ್ಲಿವೆ. ಈ ವಿಷಯವನ್ನು ನಾವು ಮುಂದೆ ವಿವರಿಸಬಹುದು. ಸದ್ಯಃ "ರಾಜ್ಯ" ಪದದಿಂದ ಸೂಚಿತವಾಗುವ ಸಮಾಜದ ಲಕ್ಷಣಗಳೇನೆಂಬುದನ್ನು ವಿಚಾರಮಾಡಬೇಕಾಗಿದೆ.

## ಪಾಶ್ಚಾತ್ಯ ಮತ

ಪಾಶ್ಚಾತ್ಯ ರಾಜ್ಯಶಾಸ್ತ್ರ ಶೋಧಕರ ರಾಜ್ಯಲಕ್ಷಣ ನಿರೂಪಣೆಯು ಹೀಗಿರುತ್ತದೆ:—

ಒಂದು ಕುಟುಂಬದ ವ್ಯಕ್ತಿಗಳು ಪರಸ್ಪರ ಹೇಗಿರಬೇಕೆಂಬ ವಿಷಯದಲ್ಲಿಯೂ, ಅನೇಕ ಕುಟುಂಬಗಳು, ಅಥವಾ ಕುಲಗಳು, ಪರಸ್ಪರ ಯಾವ

ರೀತಿ ನಡೆದುಕೊಳ್ಳಬೇಕೆಂಬ ವಿಷಯದಲ್ಲಿಯೂ ಒಂದು ಸಾಮಾನ್ಯ ನಿಬಂಧನೆಯು ಗೊತ್ತಾಗಿ—ಅನೇಕ ಕುಟುಂಬಗಳನ್ನು ಅಥವಾ ಕುಲಗಳನ್ನು ಒಳಗೊಂಡಿರುವ ಒಂದು ದೊಡ್ಡ ಸಮಾಜವು ಆ ನಿಬಂಧನೆಯನ್ನು ತಾನಾಗಿ ಅಂಗೀಕರಿಸಿ,—ಆ ಸಮಾಜದೊಳಗೆ ಆ ನಿಬಂಧನೆಯನ್ನು ಚಾಲಿತವಾಗಿರಿಸುವುದಕ್ಕೂ, ಸಮಾಜದ ಒಕ್ಕಟ್ಟನ್ನು ಹೊರಗಿನ ಪೆಟ್ಟುಗಳಿಂದ ಕಾಪಾಡುವುದಕ್ಕೂ ತಕ್ಕಷ್ಟು ಪ್ರಬಲವಾದ ಅಧಿಕಾರಶಕ್ತಿಯೊಂದು ಗೊತ್ತಾಗಿದ್ದರೆ,—ಆಗ ರಾಜ್ಯದ ಪ್ರಾರಂಭಾವಸ್ಥೆಯು ಏರ್ಪಟ್ಟಿದೆ ಎಂದು ಭಾವಿಸಬಹುದು.—ಇದು ಗ್ರೀನ್ ಎಂಬ ತತ್ತ್ವಶೋಧಕನ ಮತ.[4]

ಸಾಮಾನ್ಯವಾಗಿ ಒಂದು ಗೊತ್ತಾದ ಪ್ರದೇಶವನ್ನಾಕ್ರಮಿಸಿಕೊಂಡಿರುವ ಬಹುಸಂಖ್ಯಾಕವಾದ ಒಂದು ಮನುಷ್ಯಸಮುದಾಯದಲ್ಲಿ, ಅದರ ಬಹುಮಂದಿಯ, ಅಥವಾ ಅದರಲ್ಲಿ ಗೊತ್ತಾದ ಒಂದು ಪಂಗಡದ ಜನರ, ಅಭಿಮತವು—ಆ ಬಹುಮಂದಿಯ ಅಥವಾ ಆ ಪಂಗಡದ ಶಕ್ತಿವಿಶೇಷದಿಂದ—ಅದನ್ನೆದುರಿಸುವ ಯಾವ ಸಾಮಾಜಿಕನ ಮೇಲಾದರೂ ನಡೆಯುವಂತಿದ್ದರೆ, ಆ ಸಮಾಜವೇ ರಾಜ್ಯ.—ಇದು ಹಾಲೆಂಡ್ ಎಂಬಾತನ ಮತ.[5]

ರಾಜ್ಯವೆಂದರೆ ಮಾನವಕುಲದಲ್ಲಿ ಒಂದು ವ್ಯವಸ್ಥೆಗೆ ಅಥವಾ ಒಂದು ಕಟ್ಟುಪಾಡಿಗೆ ಒಳಪಟ್ಟಿರುವ ಒಂದು ಗೊತ್ತಾದ ಭಾಗ. (೧) ಅದು ಎಲ್ಲರನ್ನೂ ಒಳಕೊಂಡುದಾಗಿರಬೇಕು. (ಎಂದರೆ ರಾಜ್ಯನಿಯಮಕ್ಕೆ ಮೇಲ್ಪಟ್ಟವರು ಯಾರೂ ರಾಜ್ಯದೊಳಗೆ ಇರಲಾಗದು.) (೨) ಅದು ತಾನೊಂದೇ ಇರತಕ್ಕುದು. (ಎಂದರೆ ಒಂದೇ ಸಮಾಜದಲ್ಲಿ ಎರಡು ಬೇರೆಬೇರೆ ರಾಜ್ಯಗಳು

---

[4] When a general law has been arrived at, regulating the position of members of a family towards each other and the dealings of families or tribes with each other; when it is voluntarily recognized by a community of families or tribes, and maintained by a power strong enough at once to enforce it within the community and to defend the integrity of the community against attacks from without, then the elementary state has been formed.—T. H. GREEN.

[5] A State is a numerous assemblage of human beings, generally occupying a certain territory, amongst whom the will of the majority or of an ascertainable class of persons is, by the strength of such a majority or class, made to prevail against any of their number who oppose it.

—T. E. HOLLAND

ಇರಲಾಗದು.) (೩) ಅದು ಶಾಶ್ವತವಾದದ್ದು. (೪) ಅದು ಎಲ್ಲ ವಿಷಯ ಗಳಲ್ಲಿಯೂ ಸ್ವತಂತ್ರಸ್ವಾಮಿಯಾದದ್ದು (ಎಂದರೆ ಅದರ ಮಾತಿಗೆ ಎದುರಿಲ್ಲ).—ಇದು ಬರ್ಗೆಸ್ ಎಂಬಾತನ ಮತ.[6]

ಒಬ್ಬ ಗೊತ್ತಾದ ಮನುಷ್ಯಪ್ರಭುವು, ತನ್ನಂಥ ಇನ್ನೊಬ್ಬ ಪ್ರಭುವಿಗೆ ವಾಡಿಕೆಯಾಗಿ ಅಧೀನನಾಗಿರದೆ, ಒಂದು ಗೊತ್ತಾದ ಮನುಷ್ಯ ಸಮಾಜದ ಬಹುಮಂದಿಯ ರೂಢಿಯಾದ ವಿಧೇಯತೆಗೆ ಪಾತ್ರನಾಗಿದ್ದರೆ (ಆ ಸಮಾಜವು ಗಣ್ಯವೆನಿಸಿಕೊಳ್ಳುವಷ್ಟು ಸಂಖ್ಯೆಗೆ ಕಡಮೆ ಬೀಳದೆ ಇದ್ದಲ್ಲಿ), ಆ ಗೊತ್ತಾದ ಪ್ರಭುವು ಆ ಸಮಾಜದಲ್ಲಿ ಸ್ವಾಮಿಯಾಗುವನು; ಆ ಸಮಾಜವು (ಆ ಪ್ರಭುವೂ ಸೇರಿ) ರಾಜಕೀಯವೂ ಸ್ವತಂತ್ರವೂ ಆದ ಸಮಾಜವಾಗುವುದು.—ಇದು ಆಸ್ಟಿನ್ ಎಂಬಾತನ ಮತ.[7]

ಸ್ವತಂತ್ರರಾಜ್ಯದ ಲಕ್ಷಣಗಳಾವುವೆಂದರೆ: (೧) ಅದಕ್ಕೆ ಸೇರಿದ ಜನ ಸಮುದಾಯವು ಒಂದು ರಾಜಕೀಯೋದ್ದೇಶದಿಂದ ಚಿರಕಾಲಿಕವಾಗಿ ಸ್ಥಾಪಿಸಲ್ಪಟ್ಟಿರಬೇಕು. (೨) ಅದಕ್ಕೆ ಗೊತ್ತಾದ ಒಂದು ಭೂಪ್ರದೇಶ ವಿರಬೇಕು; (೩) ತನ್ನಿಂದ ಬೇರೆಯಾದ ಯಾವ ಅಧಿಕಾರಕ್ಕೂ ಅದು ಒಳಪಟ್ಟಿರಬಾರದು—ಇದು ಹಾಲ್ ಎಂಬಾತನ ಮತ.[8]

---

[6] The State is a particular portion of mankind viewed as an organized unit. (1) It is all-comprehensive. (2) It is exclusive. (3) It is permanent. (4) It is sovereign.

—T. W. BURGESS.

[7] If a determinate human superior, not in a habit of obedience to a like superior, receive habitual obedience from the bulk of a given society (not falling short of a number which may be called considerable), that determinate superior is sovereign in that society and the society (including the superior) is a society political and independent. —AUSTIN, *Lectures on Jurisprudence.*

[8] The marks of an independent State are: (1) that the community constituting it is permanently established for a political end, (2) that it possesses a defined territory, and (3) that it is independent of external control.

—W. E. HALL, *International Law.*

## ನಮ್ಮವರ ಮತ

ರಾಜ್ಯವು ಏಳು ಲಕ್ಷಣಗಳಿಂದ ಕೂಡಿರುವುದೆಂದು—"ಸಪ್ತಾಂಗ"ವೆಂದು—ನಮ್ಮ ಪೂರ್ವಿಕರ ಮತ. ಅವರಲ್ಲಿಬ್ಬರ ವಿವರಗಳು ಹೀಗಿರುತ್ತವೆ:—

| ಕಾಮಂದಕ | ಕೌಟಿಲ್ಯ |
|---|---|
| ೧. ಸ್ವಾಮಿ | ಸ್ವಾಮಿ |
| ೨. ಅಮಾತ್ಯ | ಅಮಾತ್ಯ |
| ೩. ಸುಹೃತ್ | ಮಿತ್ರ |
| ೪. ಕೋಶ | ಕೋಶ |
| ೫. ರಾಷ್ಟ್ರ | ಜನಪದ |
| ೬. ದುರ್ಗ | ದುರ್ಗ |
| ೭. ಬಲ | ದಂಡ |

ಅಮರಕೋಶವು ಕಾಮಂದಕ ವಚನವನ್ನೇ ಅನುಸರಿಸಿದೆ:—

ಸ್ವಾಮ್ಯಮಾತ್ಯ ಸುಹೃತ್ಕೋಶ ರಾಷ್ಟ್ರ ದುರ್ಗ ಬಲಾನಿ ಚ |
ರಾಜ್ಯಾಂಗಾನಿ ಪ್ರಕೃತಯಃ ಪೌರಾಣಾಂ ಶ್ರೇಣಯೋಪಿ ಚ ||

"ಪೌರ ಶ್ರೇಣಿ"ಯೂ ರಾಜ್ಯಕ್ಕೆ ಒಂದಂಗವೆಂದೂ, ಅದೂ ಸೇರಿ ರಾಜ್ಯವು ಅಷ್ಟಾಂಗವಾದದ್ದೆಂದೂ ಒಂದು ಮತವುಂಟು. ಆದರೆ, ಮೇಲಣ ಪಟ್ಟಿಯಲ್ಲಿ ೫ ನೆಯ ಅಂಶವಾದ "ರಾಷ್ಟ್ರ" ಪದಕ್ಕೇ "ಪ್ರಜೆ"ಯೆಂದು ಅರ್ಥವೆಂದೂ, ಪ್ರಜಾವರ್ಗದಲ್ಲಿ ಪುರಜನ ಶ್ರೇಣಿಯೂ ಸೇರಿರುವುದೆಂದೂ ಸಮಾಧಾನ ಹೇಳಬಹುದು. ಕೌಟಿಲ್ಯನು ಉಪಯೋಗಿಸಿರುವ ಮಾತಿನಲ್ಲಂತೂ ಸಂದೇಹಕ್ಕೆ ಆಸ್ಪದವೇ ಇಲ್ಲ, "ಜನಪದ"ವೆಂದರೆ ಪ್ರಜಾ ಸಮುದಾಯವೆಂದೇ ಅರ್ಥ. ಜನಪದವೆಂಬ ಮಾತು ಇಂಗ್ಲಿಷಿನ "ನೇಷನ್" ಎಂಬ ಪದಕ್ಕೆ ಸರಿಸಮವೆಂದು ಇಟ್ಟುಕೊಳ್ಳಬಹುದು. ಇಷ್ಟರ ಮೇಲೆ, ಪುರಜನ ಗ್ರಾಮಜನರನ್ನೊಳಗೊಂಡ ಪ್ರಜಾಸಮೂಹವು ರಾಜ್ಯಕ್ಕೆ ಪ್ರಥಮವಾದ ಮೂಲವಸ್ತುವೇ ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಮೇಲೆ ಹೇಳಿದ ಏಳಂಶಗಳು ರಾಜ್ಯದ "ಅಂಗಾಂಗ" ಗಳಾದರೆ, ಪ್ರಜೆಯೇ "ಅಂಗಿ"—ಅಂಗವನ್ನು ಧರಿಸಿರುವ ಚೈತನ್ಯ. ಪ್ರಜೆಯೇ ರಾಜ್ಯದ ಜೀವಾಧಿಷ್ಠಾನವಾದ ಶರೀರ. ಮೇಲಣ "ಸ್ವಾಮಿ" ಎಂಬ ಪದದಿಂದಲೇ ಇದು ವ್ಯಕ್ತ ವಾಗುತ್ತದೆ; ಎಲ್ಲಿ ಪ್ರಜೆಯಿಲ್ಲವೋ ಅಲ್ಲಿ "ಸ್ವಾಮಿ"ತ್ವವು ಎಲ್ಲಿಂದ ಬರಬೇಕು? ಹಾಳೂರಿಗೆ ಗೌಡನೇಕೆ?

ಸಪ್ತಾಂಗಗಳ ಅರ್ಥವನ್ನು ಚೆನ್ನಾಗಿ ತಿಳಿದುಕೊಳ್ಳುವುದು ಅವಶ್ಯವಾದುದರಿಂದ, ಅದನ್ನಿಲ್ಲಿ ಸ್ವಲ್ಪಮಟ್ಟಿಗೆ ವಿವರಿಸಿ ಹೇಳ ಬಹುದು:—(೧) "ಸ್ವಾಮಿ"ಯೆಂದರೆ ಒಮ್ಮುಖವಾದ ಅಧಿಕಾರ ಅಥವಾ ಯಾಜಮಾನ್ಯ. ಅಧಿಕಾರವು (ಇಂಗ್ಲೆಂಡು ಮೈಸೂರು ಗಳಲ್ಲಿರುವಂತೆ) ವಂಶಪರಂಪರೆಯಿಂದ ಬಂದ ರಾಜನ ಕೈಯಲ್ಲಾ ದರೂ ಇರಬಹುದು; ಫ್ರಾನ್ಸು ಅಮೆರಿಕಗಳಲ್ಲಿರುವಂತೆ ಜನ ರಿಂದಲೇ ಚುನಾಯಿಸಲ್ಪಟ್ಟ ಪ್ರಜಾಪ್ರಮುಖನ ಕೈಯಲ್ಲಾ ದರೂ ಇರಬಹುದು. ಹೇಗಾದರೂ ರಾಜ್ಯದ ಸೂತ್ರವೆಲ್ಲ ಒಬ್ಬ ವ್ಯಕ್ತಿಯ ಕೈಯಲ್ಲಿರಬೇಕು. (೨) "ಅಮಾತ್ಯ" ಎಂದರೆ ಗೊತ್ತಾದ ಕಾರುಬಾರೀವರ್ಗ. ರಾಜನ ಕೈಯಲ್ಲಿರುವ ಸೂತ್ರಗಳು ಸರಿಯಾಗಿ ನಡೆದು, ರಾಜನ ಅಧಿಕಾರವು ಕಾರ್ಯಕಾರಿಯಾಗು ವಂತೆ ಮಾಡುವುದಕ್ಕೆ ಮಂತ್ರಿಗಳು, ನ್ಯಾಯಾಧಿಪತಿಗಳು ಮೊದ ಲಾದ ಸಹಾಯಕವರ್ಗವಿರಬೇಕು. ರಾಜನೇ ಸ್ವಯವಾಗಿ ಎಲ್ಲ ಕೆಲಸಗಳನ್ನೂ ಸರಿಯಾಗಿ ಮಾಡಲಾಗುವುದಿಲ್ಲ; ಆತನೊಬ್ಬನ ಇಚ್ಛೆ ಬುದ್ಧಿಗಳಂತೆಯೇ ಎಲ್ಲವೂ ನಡೆಯುವುದು ಸರಿಯೂ ಅಲ್ಲ. ಆದಕಾರಣ ಆತನಿಗೆ ಸಮ್ಮತವಾಗಿ ಕ್ಲುಪ್ತರೀತಿಯಲ್ಲಿ ನಡೆಯುವ ರಾಜ್ಯಯಂತ್ರವೊಂದಿರಬೇಕು. (೩) "ಕೋಶ"ವೆಂದರೆ ಖಜಾನೆ—ಅರ್ಥಾತ್, ನಿಷ್ಕರ್ಷೆಯಾದ ವರಮಾನ. ಕಂದಾಯ ತೆರಿಗೆಗಳಿಂದ ಆದಾಯಬಾರದಿದ್ದರೆ ರಾಜ್ಯಕಾರ್ಯಗಳು ನಡೆಯ ಲಾರವು. (೪) "ರಾಷ್ಟ್ರ"ವೆಂದರೆ ನಿಷ್ಕರ್ಷೆಯಾದ ಮೇರೆಗಳುಳ್ಳ ಭೂಭಾಗ, ಗೊತ್ತಾದ ನಿವಾಸ ಭೂಮಿಯಿಲ್ಲದ ರಾಜ್ಯವು

ಸ್ಥಾಯಿಯಾಗಿ ನಿಲ್ಲಲಾರದು. (೫) "ಸುಹೃತ್" ಎಂದರೆ ಪರ ದೇಶಗಳೊಡನೆ ಸ್ನೇಹಬೆಳಸುವ ಸ್ವಾತಂತ್ರ್ಯ. ಪ್ರಬಲರಾಜ್ಯಗಳ ವರನ್ನು ಸಾಮಂತರನ್ನಾಗಿಯೋ ಮಿತ್ರರನ್ನಾಗಿಯೋ ಮಾಡಿ ಕೊಂಡು ಅನುಕೂಲಪಡಿಸಿಕೊಳ್ಳದಿದ್ದರೆ ರಾಜ್ಯಕ್ಕೆ ಶತ್ರುಭಯವು ತಪ್ಪಲಾರದು. (೬) "ದುರ್ಗ"ವೆಂದರೆ ಕೋಟೆ ಮೊದಲಾದ ರಾಜ್ಯಸಂರಕ್ಷಣೋಪಕರಣಗಳು. ರಾಜ್ಯವನ್ನು ಕೋಟೆ ಕಂದಕ ಕಾಡು ಮೊದಲಾದ ಆವರಣಗಳಿಂದ ಸಂರಕ್ಷಣೆ ಮಾಡಿರದಿದ್ದರೆ ಮಿತ್ರರ ಗೌರವ ಅದಕ್ಕೆ ತಪ್ಪಿ, ಅವರಲ್ಲಿ ಶತ್ರುಬುದ್ಧಿ ಹುಟ್ಟ ಬಹುದು; ಶತ್ರುಗಳಂತೂ ನಿರ್ಭೀತರಾಗಿ ದಂಡೆತ್ತಿ ಬರಬಹುದು. (೭) ಬಲವೆಂದರೆ ಸೈನ್ಯ. ರಾಜ್ಯದೊಳಗಿನ ದುಷ್ಟರನ್ನಡಗಿಸು ವುದು (ಪೊಲೀಸ್), ಹೊರಗಿನ ಶತ್ರುಗಳನ್ನೋಡಿಸುವುದು (ಮಿಲಿಟರಿ)—ಈ ಎರಡು ಕಾರ್ಯಗಳಿಗೂ ಸುಸಜ್ಜಿತವಾದ ಸೇನೆಯಿಲ್ಲದಿದ್ದರೆ ಆಗದು. ದುರ್ಗ ಸೇನೆಗಳು ರಾಜ್ಯಾಂಗವೆಂದು ಹೇಳಿದ್ದರಿಂದಲೇ ವಿದೇಶಗಳೊಡನೆ ಯುದ್ಧಹೂಡುವ ಸ್ವಾತಂತ್ರ್ಯವೂ ರಾಜ್ಯಕ್ಕೆ ಇರತಕ್ಕುದೆಂದು ಅರ್ಥವಾಯಿತು.

ಸಾವಿರಾರು ವರ್ಷಗಳ ಹಿಂದೆಯೇ ನಮ್ಮ ಪೂರ್ವಿಕರು ಹೀಗೆ ಪರಿಪೂರ್ಣವಾದ ರಾಜ್ಯಾಂಗ ವಿಮರ್ಶೆಯನ್ನು ಮಾಡಿದ್ದ ರೆಂಬುದು ನಮಗೆ ಅಭಿಮಾನಜನಕವಾದ ಸಂಗತಿಯೇ ಸರಿ. ಯೂರೋಪ್ ಖಂಡದಲ್ಲಿ ನಾಗರಿಕತೆಗೆ ಮೊಟ್ಟಮೊದಲನೆಯವ ರೆನಿಸಿದ್ದ ಗ್ರೀಸ್ ದೇಶದವರ ರಾಜ್ಯಾಂಗವಿಮರ್ಶೆಯು ನಮ್ಮ ಕೌಟಿಲ್ಯನ ಕಾಲಕ್ಕೆ (ಕ್ರಿಸ್ತಪೂರ್ವ ೩೨೧ನೆಯ ವರ್ಷದ ಸುಮಾರಿಗೆ) ಇಷ್ಟು ಮಟ್ಟಿನ ಪರಿಪೂರ್ಣಸ್ಥಿತಿಗೆ ಬಂದಿರಲಿಲ್ಲ ವೆಂದು ವಿದ್ವಾಂಸರಾದವರು ಹೇಳಿದ್ದಾರೆ. ಈ ನಮ್ಮ ಏಳು ರಾಜ್ಯಲಕ್ಷಣಗಳು ಮೇಲೆ ಉದಾಹೃತಗಳಾದ ಪಾಶ್ಚಾತ್ಯ ಮತಗಳಿಂದ (ಕಡೆಯಲ್ಲಿ ಹಾಲ್ ಎಂಬಾತನ ವಾಕ್ಯದಲ್ಲಿ ಅಂಕಿ ಗಳಿಂದ ತೋರಿಸಿರುವಂತೆ) ಹೊರಪಡುವ ಮೂರು ಅಂಶ ಗಳೊಡನೆ ಚೆನ್ನಾಗಿ ಸಮನ್ವಯ ಹೊಂದುತ್ತವೆ. ಹೇಗೆಂದರೆ:—

| | |
|---|---|
| | ಯಾವ ಜನಸಮುದಾಯವು— |
| (೧) ಸ್ವಾಮಿ (ಪ್ರಜಾಪೂರ್ವಕ)<br>(೨) ಅಮಾತ್ಯ | (೧) ಒಂದು ನಿಯತವಾದ ಆಧಿಪತ್ಯಕ್ಕೆ ಅಥವಾ ಆಳಿಕೆಗೆ (ಸರ್ಕಾರಕ್ಕೆ) ಒಳಪಟ್ಟು, |
| (೩) ಕೋಶ<br>(೪) ರಾಷ್ಟ್ರ | (೨) ಭೂಮಿ ಮೊದಲಾದ ಸ್ವತ್ತುಗಳನ್ನು ತನ್ನಿಷ್ಟಾನುಸಾರ ಉಪಯೋಗಿಸಲಾಗುವಂತೆ ಪಡೆದುಕೊಂಡಿದ್ದು, |
| (೫) ಸುಹೃತ್<br>(೬) ದುರ್ಗ<br>(೭) ಬಲ | (೩) ಅನ್ಯರೊಡನೆ ಸ್ನೇಹವನ್ನಾಗಲಿ ಯುದ್ಧವನ್ನಾಗಲಿ ಮಾಡುವುದಕ್ಕೆ ಸ್ವತಂತ್ರವಾಗಿರುವುದೋ,<br>—ಅದು ರಾಜ್ಯವೆನಿಸುವುದು. |

## ಐಹಿಕ ಸಂಸ್ಥೆ

ಈ ವಿವರಣೆಯ ಸಾರಾಂಶವೇನೆಂದರೆ :—ಯಾವ ಮನುಷ್ಯ ಸಮಾಜವು ತನಗೆ ಸರಿತೋರಿದಂತೆ, ತನಗೆ ಸೇರಿದ ವ್ಯಕ್ತಿಗಳ (ಅಥವಾ ಪ್ರಜೆಗಳ) ಹಿತಕ್ಕಾಗಿ, ತನ್ನ ಶಕ್ತಿಸಂಪತ್ತುಗಳನ್ನುಪಯೋಗಿಸಿಕೊಳ್ಳಲು ಸ್ವತಂತ್ರಾಧಿಕಾರವುಳ್ಳದ್ದಾಗಿ, ಆ ಅಧಿಕಾರದ ನಿರ್ವಾಹಕ್ಕಾಗಿ ಒಂದು ವ್ಯವಸ್ಥೆಯನ್ನು (ಕಟ್ಟುಪಾಡು) ಗೊತ್ತುಮಾಡಿಕೊಂಡಿರುತ್ತದೆಯೋ ಆ ಸಮಾಜಕ್ಕೆ "ರಾಜ್ಯ"ವೆಂಬ ಹೆಸರು ಸಲ್ಲುತ್ತದೆ; ಆ ಅಧಿಕಾರಕ್ಕೆ 'ರಾಜ್ಯಶಕ್ತಿ' ಅಥವಾ 'ಸ್ವಾಮ್ಯ', 'ಸ್ವಾಮಿತ್ವ', (ಸಾವರೆಯ್ನ್ಟಿ =Sovereignty) ಎಂದು ಸಂಜ್ಞೆ; ಅದರ ವ್ಯವಸ್ಥೆಗೆ "ಅಧಿಕಾರಿವರ್ಗ," ಅಥವಾ ಸರಕಾರ (ಗವರ್ನ್‌ಮೆಂಟ್ =Government) ಅಥವಾ ರಾಜ್ಯಯಂತ್ರ ಎಂದು ಹೆಸರು.

ಪ್ರಕೃತಕಾಲದಲ್ಲಿ ನಾವು ಗಮನಿಸಬೇಕಾದ ರಾಜ್ಯಲಕ್ಷಣ ಇನ್ನೊಂದಿದೆ: ಈಗಿನ ರಾಜ್ಯವು ಕೇವಲ ಐಹಿಕ ("ಸೆಕ್ಯುಲರ್") ಸಂಸ್ಥೆ. ಅದು ಪರಲೋಕವಿಚಾರಕ್ಕೆ ಕೈಹಾಕದು. ಅದು ದೃಷ್ಟಿಯಲ್ಲಿರಿಸಿಕೊಂಡಿರುವ "ಹಿತ" ಲೌಕಿಕ ಹಿತ. ಇಂದಿನ ರಾಜ್ಯವು ಆಮುಷ್ಮಿಕ ಆಧ್ಯಾತ್ಮಿಕ ವಿಚಾರಗಳಲ್ಲಿ,—ಸ್ವರ್ಗ,

ಸರಕ, ಜನ್ಮಾಂತರ್ಯ ಮುಂತಾದ ಪ್ರಶ್ನೆಗಳಲ್ಲಿ,—ತಟಸ್ಥ ವಾದದ್ದು. ಅದು ಯಾವ ಒಂದು ಮತವನ್ನೂ, ಯಾವೊಂದು ದೈವದರ್ಶನವನ್ನೂ, ತನ್ನದೆಂದು ಭಾವಿಸದು. ತನ್ನ ಎಲ್ಲ ಪ್ರಜೆಗಳ ಎಲ್ಲ ಮತಧರ್ಮಗಳ ವಿಷಯದಲ್ಲಿಯೂ ಅದು ಸಮಭಾವವನ್ನು ತೋರತಕ್ಕದ್ದು. ಯಾವ ಮತ ತತ್ತ್ವಕ್ಕೂ ರಾಜ್ಯವು ಅಭಿ ಮಾನಿಯೂ ಅಲ್ಲ, ವಿರೋಧಿಯೂ ಅಲ್ಲ. ಎಲ್ಲ ಮತಾಚಾರ ಗಳಿಗೂ ಎಲ್ಲ ದೈವೋಪಾಸನೆಗಳಿಗೂ ಸಮಾನ ಸಂರಕ್ಷಣೆ ಕೊಡುವುದರ ವಿನಾ ರಾಜ್ಯಕ್ಕೂ ಪ್ರಜೆಯ ಮತನಿಷ್ಠೆಗೂ ಯಾವ ಪ್ರತ್ಯಕ್ಷ ಸಂಬಂಧವೂ ಇಲ್ಲ.

ಪೂರ್ವಕಾಲದ ಹಿಂದೂ ರಾಜರುಗಳು ತಮ್ಮ ಪ್ರಜಾ ಮಂಡಲದ ನಾನಾ ಮತಾಚಾರಗಳ ವಿಷಯದಲ್ಲಿ ಅನು ಸರಿಸುತ್ತಿದ್ದ ರೀತಿ ಸಾಮಾನ್ಯವಾಗಿ ಈ ತೆರದ್ದೇ. ಆ ರಾಜರು ತಮ್ಮ ಸ್ವಂತ ಮತವಿಶ್ವಾಸವೇನೇ ಇದ್ದುಕೊಳ್ಳಲಿ, ಅದನ್ನು ಪ್ರಜೆಯ ಮೇಲೆ ಹೇರದೆ, ಜನ ಅವರವರ ಮತವನ್ನು ಅವರವರು ಧಾರಾಳವಾಗಿ ಅನುಷ್ಠಾನ ಮಾಡಲು ಸಹನೆಯಿಂದ ಅನು ಕೂಲಪಡಿಸಿಕೊಡುತ್ತಿದ್ದರು. ಇದಕ್ಕೆ ನಿದರ್ಶನಗಳು ಹೊಯ್ಸ ಳರ, ವಿಜಯನಗರದ ಮತ್ತೆ ಮೈಸೂರಿನ ರಾಜಚರಿತ್ರೆಗಳಲ್ಲಿ ಚೆನ್ನಾಗಿ ಕಾಣಬರುತ್ತವೆ. ಸರ್ವಮತಸಹನೆಯೇ ಮತ ಪಕ್ಷ ಪಾತರಹಿತತೆ. ಅದೇ ಇಂದಿನ ರಾಜ್ಯನೀತಿ. ಅದೇ " ಸೆಕ್ಯುಲರಿ ಸಮ್ " ಎಂಬ ಶುದ್ಧ ಲೌಕಿಕತೆ.

## ಸ್ವಾಮಿತ್ವ

ರಾಜ್ಯಕ್ಕಿರುವ ಶಕ್ತಿ ಸರ್ವಸ್ವವೇ ಸ್ವಾಮ್ಯ ಅಥವಾ ಸ್ವಾಮಿತ್ವ.

ಆ ಸ್ವಾಮಿತ್ವ ಎರಡು ತೆರನಾದದ್ದು : (೧) ಅಧಿಕಾರಿಗಳನ್ನು ನಿಯಮಿಸುವುದು, ಕಾನೂನುಗಳನ್ನು ಮಾಡುವುದು, ತೆರಿಗೆ ಗಳನ್ನು ತೆಗೆದುಕೊಳ್ಳುವುದು ಮುಂತಾದ ಒಳಗಿನ ಆಡಳಿತವು

'ಅಂತಃಸ್ವಾಮ್ಯ" (ಇನ್‌ಟರ್ನಲ್ ಸಾವರೆಯ್ನ್‌ಟಿ). (೨) ಪರರಾಜ್ಯಗಳೊಡನೆ ಕರಾರು ಮಾಡಿಕೊಳ್ಳುವುದು ಅಥವಾ ಯುದ್ಧಮಾಡುವುದು ಮುಂತಾದ ಹೊರಗಿನ ಆಡಳಿತವು 'ಬಹಿಃಸ್ವಾಮ್ಯ" (ಎಕ್ಸ್‌ಟರ್ನಲ್ ಸಾವರೆಯ್ನ್‌ಟಿ). ಕೆಲವು ರಾಜ್ಯಗಳು ಅಂತಸ್ಸ್ವಾಮ್ಯ ಬಹಿಸ್ಸ್ವಾಮ್ಯಗಳೆರಡನ್ನೂ ತಮ್ಮ ಕೈಯಲ್ಲಿಯೇ ಇಟ್ಟುಕೊಂಡಿರುತ್ತವೆ; ಇಂಗ್ಲೆಂಡು, ಅಮೆರಿಕದ ಸಂಯುಕ್ತರಾಷ್ಟ್ರ, ಇಂದಿನ ಭಾರತ—ಇವು ಅಂತಹುವು. ಕೆಲವು ರಾಜ್ಯಗಳು ಅಂತಸ್ಸ್ವಾಮ್ಯವನ್ನು ತಾವೇ ವಹಿಸಿ ಕೊಂಡು ಬಹಿಸ್ಸ್ವಾಮ್ಯವನ್ನು ಮಾತ್ರ ಬೇರೊಬ್ಬರಿಗೆ ವಹಿಸಿರುವುದುಂಟು; ಬ್ರಿಟಿಷರ ಕಾಲದ ಮೈಸೂರು ಅಂಥಾದ್ದು.

---

* ಇಂಡಿಯದ ಇಂದಿನ ರಾಜ್ಯನಿಬಂಧನೆಯಲ್ಲಿ "ಸ್ಟೇಟ್" ಅಥವಾ 'ರಾಜ್ಯ" ಎಂಬ ಹೆಸರನ್ನು ಮೈಸೂರು, ಮದರಾಸು, ಬೊಂಬಾಯಿ ಮುಂತಾದ ಒಳಪ್ರದೇಶಗಳಿಗೆ ಕೊಟ್ಟಿದೆ. ಇದು "ರಾಜ್ಯ" ಶಬ್ದದ ಔಪಚಾರಿಕ ಪ್ರಯೋಗವೇ ಹೊರತು ಶಾಸ್ತ್ರೀಯ ಪ್ರಯೋಗವಲ್ಲ. ಆ ಒಳಪ್ರದೇಶಗಳು ವಾಸ್ತವವಾಗಿ ಆಡಳಿತದ ಅನುಕೂಲತೆಗಾಗಿ ಮಾಡಿಕೊಂಡಿರುವ ಕ್ಷೇತ್ರ ವಿಭಾಗಗಳು. ಒಂದು ಸರಕಾರವು ಶಾಸ್ತ್ರದೃಷ್ಟಿಯಿಂದ "ರಾಜ್ಯ" ಎಂದೆನ್ನಿಸಿಕೊಳ್ಳಬೇಕಾದರೆ ಅದು ತನ್ನ ಭೂಕ್ಷೇತ್ರದ ವಿಷಯದಲ್ಲಿಯೂ ಪ್ರಜಾಜನದ ವಿಷಯದಲ್ಲಿಯೂ ಸರ್ವಸ್ವತಂತ್ರವಾಗಿ ಸರ್ವಾಧಿಕಾರವುಳ್ಳದ್ದಾಗಿರಬೇಕು. (೧) ಯುದ್ಧ ಹೂಡುವ ಮತ್ತು ಕರಾರು ಮಾಡಿಕೊಳ್ಳುವ ಅಧಿಕಾರ, (೨) ನಾನಾ ವಿಧದ ಸೈನ್ಯಗಳನ್ನಿರಿಸಿಕೊಳ್ಳುವ ಅಧಿಕಾರ, (೩) ಸಾಲವೆತ್ತುವ ಅಧಿಕಾರ, (೪) ಸುಂಕ ತೆರಿಗೆಗಳ ಅಧಿಕಾರ (೫) ಕಾನೂನು ಕಾಯಿದೆಗಳಿಗಾಗಿ ಹೊರಗಣ ಅನುಮತಿಗೆ ಕಾದಿರದೆ ಸ್ವತಃ ನಡೆಯುವ ಅಧಿಕಾರ, (೬) ತನ್ನ ಆಡಳಿತಗಳಲ್ಲಿ ಹೊರಗಣ ಮೇಲ್ವಿಚಾರಣೆಗೆ ಒಳಪಡದಿರುವ ಅಧಿಕಾರ—ಇವೆಲ್ಲ ರಾಜ್ಯದ ಸ್ವಾಮಿತ್ವದ ಅಂಶಗಳು. ಈ ಸ್ವಾಮ್ಯಾಂಶಗಳು ಈಗ ಇರುವುದು ಇಂಡಿಯದ ಕೇಂದ್ರ ಸರಕಾರಕ್ಕೆ ಮಾತ್ರ. ಹೊಸದೆಹಲಿಯಿಂದ ನಡೆಯುವ ಸರಕಾರವೇ ಸಕಲ ಜಾನಪದ ಸರಕಾರ; ಅದೊಂದೇ ರಾಜ್ಯ. ಅದರ ಒಳವಿಭಾಗಗಳುವಾಸ್ತವವಾಗಿ ಕೇವಲ ಪ್ರಾಂತಗಳು, "ಪ್ರಾವಿನ್ಸ್"ಗಳು. ಅವುಗಳಿಗೆ ರಾಜ್ಯವೆಂಬ ಪದ ಬರಿಯ ಬಿರುದು.

## ೫. ರಾಜ್ಯವ್ಯವಸ್ಥೆಯೆಂದರೇನು ?

ಹಿಂದೆ ವಿವರಿಸಿರುವಂತೆ, ರಾಜ್ಯವೆಂಬ ಏರ್ಪಾಟಿನಲ್ಲಿ ಎರಡು ಅಂಶಗಳು ಮಿಳಿತವಾಗಿರುತ್ತವೆ :—(೧) ಸ್ವಾಮಿ, (೨) ಪ್ರಜೆ ಎಂಬೆರಡರ ಧರ್ಮಗಳಾದ (೧) ಸಮಾಜವನ್ನಾಳುವ ಶಕ್ತಿ, (೨) ಆ ಶಕ್ತಿಗೆ ಸಾಮಾಜಿಕರು ತೋರುವ ಗೌರವ. ಈ ಎರಡಂಶಗಳೇ (೧) ಅಧಿಕಾರ, (೨) ವಿಧೇಯತೆ. ಅಧಿಕಾರವಿಲ್ಲದೆಡೆಯಲ್ಲಿ ವಿಧೇಯತೆಗೆ ಕಾರಣವಿಲ್ಲ ; ವಿಧೇಯತೆಯಿಲ್ಲದಿರುವಲ್ಲಿ ಅಧಿಕಾರವೆಂಬುದಕ್ಕೆ ಅವಕಾಶವಿಲ್ಲ. ಹೀಗೆ ರಾಜ್ಯವಿರುವುದಕ್ಕೆ—ಎಂದರೆ ಅದರ ಅಸ್ತಿತ್ವಕ್ಕೆ—ಮೂಲಭೂತಗಳಾದ ಈ ಸ್ವಾಮಿ-ಪ್ರಜೆಗಳ, ಅಥವಾ ಅಧಿಕಾರ-ವಿಧೇಯತೆಗಳ ಅನ್ಯೋನ್ಯರೀತಿಯನ್ನೂ, ಅವುಗಳ ಸ್ವರೂಪಗಳನ್ನೂ, ಸಾಧನಗಳನ್ನೂ ಕುರಿತು ಆಗಿರುವ ನಿರ್ಣಯಗಳಿಗೆ ಒಟ್ಟಾಗಿ "ರಾಜ್ಯನಿಬಂಧನೆ" ಅಥವಾ "ರಾಜ್ಯವ್ಯವಸ್ಥೆ" ಎಂದು ನಾವು ಸಂಕೇತ ಮಾಡಿಕೊಳ್ಳಬಹುದು. ಇದನ್ನು ಇಂಗ್ಲಿಷಿನಲ್ಲಿ "ಕಾನ್‌ಸ್ಟಿಟ್ಯೂಷನ್" ಎಂದು ಕರೆಯುತ್ತಾರೆ.

### ರಾಜ್ಯಶಕ್ತಿಯ ಮೂಲವೆಲ್ಲಿ ?

ರಾಜ್ಯದ ಸ್ವಾಮ್ಯ ಅಥವಾ ಮೂಲ ಶಕ್ತಿ ಅಥವಾ ಅಧಿಕಾರವೆಲ್ಲವೂ ಇರುವುದು ರಾಜನ ಕೈಯಲ್ಲಿಯೇ ಎಂದು ನಮ್ಮ ದೇಶದಲ್ಲಿ ಎಲ್ಲರೂ ತಿಳಿದುಕೊಂಡಿದ್ದಾರೆ. ದೇಶದಲ್ಲಿ ನಡೆಯುವ ಎಲ್ಲ ಸಾರ್ವಜನಿಕ ಕಾರ್ಯಗಳೂ, ಎಲ್ಲ ಏರ್ಪಾಟುಗಳೂ, ಎಲ್ಲ ಕಾಯಿದೆ ಕಟ್ಟಳೆಗಳೂ ರಾಜಾಜ್ಞೆಯಿಂದಲೇ ಆಗುವುವು ಎಂದು ನಾವು ಸಾಮಾನ್ಯವಾಗಿ ಎಣಿಸಿರುತ್ತೇವೆ. ರಾಜನ ಅಂಶಲೇಶವಿಲ್ಲದ ಅಧಿಕಾರಿಯಿಲ್ಲ ; ರಾಜನ ಮಾತಿಗೆ ಎದುರುಮಾತಿಲ್ಲ—ಎಂಬುದು ನಮ್ಮಲ್ಲಿ ಸರ್ವಸಾಧಾರಣವಾದ ಭಾವನೆ. ಆದರೆ

ರಾಜನಿಗೆ ಇಷ್ಟು ದೊಡ್ಡ ಶಕ್ತಿ ಉಂಟಾದದ್ದು ಹೇಗೆ? ರಾಜ ಪದವಿಗೆ ತಳಹದಿ ಇರುವುದೆಲ್ಲಿ ? ಎಂಬ ವಿಷಯವು ವಿಚಾರಾರ್ಹ ವಾಗಿದೆ.

"ನಾಽವಿಷ್ಣುಃ ಪೃಥಿವೀಪತಿಃ" (ವಿಷ್ಣುವಿನ ಅಂಶವಿಲ್ಲದವನು ರಾಜನಾಗಲಾರನು), "ರಾಜಾ ಪ್ರತ್ಯಕ್ಷದೇವತಾ" (ರಾಜನೇ ಪ್ರತ್ಯಕ್ಷದೈವ) ಎಂಬ ಪುರಾಣವಾಕ್ಯಗಳು ನಮ್ಮಲ್ಲಿ ಎಲ್ಲರಿಗೂ ತಿಳಿದವುಗಳಾಗಿವೆ. ರಾಜನು ಭಗವಂತನ ಅಂಶವುಳ್ಳವನಾದ ಕಾರಣ, ಆತನ ವಾಕ್ಯಕ್ಕೆ ಯಾರೂ ಪ್ರತಿ ಹೇಳಕೂಡದೆಂಬುದು —ಎಂದರೆ, ಆತನ ಅಧಿಕಾರಕ್ಕೆ ಯಾರಿಂದಲೂ ಭಂಗಬರಕೂಡ ದೆಂಬುದು—ಸಹಜವಾಗಿಯೇ ಇದೆ. ಆದರೆ ಇದರಲ್ಲೊಂದು ಚೋದ್ಯವುಂಟು. ರಾಜನಿಗೆ ದೇವತಾತ್ವವು ಉಂಟಾಗುವುದು ಯಾವ ಕಾರಣದಿಂದ? ಆತನು ಕೈಕೊಳ್ಳುವ ಧರ್ಮದೀಕ್ಷೆಯಿಂ ದಲೇ ಅಲ್ಲವೆ? ರಾಜಕುಮಾರನು ಸಿಂಹಾಸನದ ಮೇಲೆ ಕುಳಿತು, ದಂಡವನ್ನು ಕೈಯಲ್ಲಿ ಧರಿಸಿದ ಬಳಿಕ ಆತನಿಗೆ ರಾಜತ್ವವೂ, ಆ ಮೂಲಕ ದೇವತಾತ್ವವೂ ಸಂಭವಿಸಬಹುದೇ ಹೊರತು, ಜನನ ಕಾಲದಲ್ಲಿಯೇ ಇವು ಅವನಿಗೆ ಸಿದ್ಧವಾಗಿರುವುದಿಲ್ಲ.

## ರಾಜದಂಡಕ್ಕೆ ಎಲ್ಲಿಂದ ಅಧಿಕಾರ ?

ಜನ್ಮದಲ್ಲಿ ಇತರ ಎಲ್ಲ ಸಾಮಾನ್ಯಜನದಂತೆ ಇದ್ದೊಬ್ಬ ವ್ಯಕ್ತಿಯು ಕಿರೀಟವೆಂಬೊಂದು ಆಭರಣವನ್ನು ಧರಿಸಿ ಸಿಂಹಾಸನ ವೆಂಬೊಂದು ಪೀಠದ ಮೇಲೆ ಕೂತಮಾತ್ರಕ್ಕೇ ಇತರರಿಗಾರಿಗೂ ಇಲ್ಲದಂಥ ದೇವಸದೃಶವಾದ ಅಧಿಕಾರವು ಆತನಿಗುಂಟಾಗು ವುದು ಹೇಗೆ? ಆ ಆಭರಣವಿಶೇಷಕ್ಕೂ ಆ ಪೀಠವಿಶೇಷಕ್ಕೂ ಇತರರು,—ಎಂದರೆ ಸಮಾಜವು,—ಕೊಟ್ಟಿರುವ ಗೌರವದಿಂದ. ಆ ಆಭರಣವೂ ಆ ಪೀಠವೂ ಇತರ ಆಭರಣಪೀಠಗಳಂತಲ್ಲ ವೆಂದೂ, ಯಾವ ಧರ್ಮದಿಂದ ತಾನು ಬದುಕಬೇಕಾಗಿರು

ವುದೋ ಆ ಧರ್ಮವನ್ನು ಕಾಪಾಡುವುದಕ್ಕೆ ಆವಶ್ಯಕವಾದ ಸ್ವಶಕ್ತಿಯನ್ನು ಆ ಕಿರೀಟಸಿಂಹಾಸನಗಳು ಸೂಚಿಸುವುವೆಂದೂ ಸಮಾಜವು ಅನಾದಿಕಾಲದಿಂದ ಸಂಕೇತಮಾಡಿಕೊಂಡು ಬಂದಿದೆ. ಧರ್ಮಸಂರಕ್ಷಣಶಕ್ತಿಗೆ ಗುರುತುಗಳಾದ ಕಿರೀಟ ಸಿಂಹಾಸನ ರಾಜದಂಡಗಳನ್ನು ಎಂಥವನು ಎಂಥ ಸಂಸ್ಕಾರ ಗಳನ್ನು ಪಡೆದು ಧಾರಣೆ ಮಾಡಬೇಕೆಂಬ ವಿಷಯದಲ್ಲಿಯೂ ಸಮಾಜವು ಅಂಗೀಕರಿಸಿರುವ ಧರ್ಮಶಾಸ್ತ್ರದ ವಿಧಿಯೇ ಇದೆ. ರಾಜ್ಯಪಟ್ಟಾಭಿಷೇಕವು ಹೇಗೆಂದರೆ ಹಾಗೆ ನಡೆಯುವ ಕ್ರಿಯೆ ಯಲ್ಲ; ಅದು ಧರ್ಮಶಾಸ್ತ್ರವಿಹಿತವಾದ ಕರ್ಮ. ಹೀಗಿರು ವುದರಿಂದ ಧರ್ಮವೇ ರಾಜಶಕ್ತಿಗೆ ಮೂಲವೆಂದು ಹೇಳಬೇ ಕಾಗುತ್ತದೆ. ಯಾವ ಧರ್ಮವನ್ನು ಸಮಾಜವೆಲ್ಲವೂ ಅಂಗೀ ಕರಿಸಿರುವುದೋ ಆ ಧರ್ಮವನ್ನು ಪರಿಪಾಲಿಸುವುದಕ್ಕೇ ಅಲ್ಲವೆ ರಾಜನು ನಿಯಮಿತನಾಗಿರುವುದು ? ರಾಜದಂಡವು "ಧರ್ಮ ಸ್ವರೂಪವಾದುದು ; ಬ್ರಹ್ಮತೇಜೋಮಯವಾದುದು" ಎಂಬ ಮನುವಾಕ್ಯವನ್ನು ಆಗಲೇ ನೋಡಿದೆವು. ಮನುಗಳು ಮತ್ತೂ ಹೀಗೆ ಹೇಳಿರುವರು :—

ದಂಡಶ್ಶಾಸ್ತಿ ಪ್ರಜಾಸ್ಸರ್ವಾ ದಂಡ ಏವಾಭಿರಕ್ಷತಿ |
ದಂಡಸ್ಸುಪ್ತೇಷು ಜಾಗರ್ತಿ ದಂಡಂ ಧರ್ಮಂ ವಿದುರ್ಬುಧಾಃ ||

(ದಂಡವು, ಎಂದರೆ ರಾಜಶಕ್ತಿಯು, ಎಲ್ಲ ಪ್ರಜೆಗಳನ್ನೂ ಆಳುವುದು ; ದಂಡವೇ ರಕ್ಷಿಸುವುದು ; ಇತರರು ನಿದ್ರಿಸುತ್ತಿರುವಾಗ ದಂಡವು ಎಚ್ಚತ್ತಿರು ವುದು ; ದಂಡವೇ ಧರ್ಮವೆಂದು ಜ್ಞಾನಿಗಳು ತಿಳಿದಿರುವರು.)

ಇದರಿಂದ ರಾಜಶಕ್ತಿಯು ಧರ್ಮದಿಂದ ಉತ್ಪನ್ನವಾಗ ತಕ್ಕುದೇ ಹೊರತು ಅನ್ಯಥಾ ಅಲ್ಲವೆಂದು ಸ್ಪಷ್ಟವಾಗಿದೆ. ಹೀಗೆಂದ ಮೇಲೆ ರಾಜನೂ ಸಹ ಧರ್ಮಕ್ಕೆ ಅಧೀನನೇ ಹೊರತು ಅದಕ್ಕೆ ಮೇಲ್ಪಟ್ಟ ಅಧಿಕಾರಿಯಲ್ಲವೆಂದು ಸಿದ್ಧವಾಗುತ್ತದೆ. ಮನು ಗಳೇ ಇದನ್ನು ವಿಶದವಾಗಿ ಅಪ್ಪಣೆ ಕೊಡಿಸಿರುವರು:—

ದಂಡೋ ಹಿ ಸುಮಹತ್ತೇಜೋ ದುರ್ಧರಶ್ಚಾಕೃತಾತ್ಮಭಿಃ |
ಧರ್ಮಾದ್ವಿಚಲಿತಂ ಹಂತಿ ನೃಪಮೇವ ಸಬಾಂಧವಮ್ ||

(ದಿವ್ಯತೇಜಸ್ಸಿನಿಂದ ಕೂಡಿರುವ ಮತ್ತು ಅಸಂಸ್ಕೃತನಿಂದ ಧರಿಸಲಾಗದ ದಂಡವು ಧರ್ಮಮಾರ್ಗದಿಂದ ತಪ್ಪಿದ ರಾಜನನ್ನು ಕುಲಸಹಿತ ನಾಶ ಮಾಡುವುದು.)

ಕಾಮಾತ್ಮಾ ವಿಷಮಃ ಕ್ಷುದ್ರಃ ದಂಡೇನೈವ ನಿಹನ್ಯತೇ ||

(ರಾಜನು ಕಾಮಿಯೂ, ವಿಷಮನೂ ಅಲ್ಪನೂ ಆದರೆ ತನ್ನ ದಂಡ ದಿಂದಲೇ ಧ್ವಂಸಮಾಡಲ್ಪಡುವನು.)

ರಾಜಶಕ್ತಿಯೆಲ್ಲವೂ ಧರ್ಮಕ್ಕೆ ಒಳಪಟ್ಟುದೇ ಹೊರತು ಮೇಲ್ಪಟ್ಟುದಲ್ಲವೆಂಬ ಈ ಅರ್ಥವನ್ನೇ ಪರಾಶರಸ್ಮೃತಿಯ ವ್ಯಾಖ್ಯಾನದಲ್ಲಿ ಮಾಧವ-ವಿದ್ಯಾರಣ್ಯರು ವಿಶದಗೊಳಿಸಿದ್ದಾರೆ:—

ವಾಜಸನೇಯ ಬ್ರಾಹ್ಮಣೇ ಸೃಷ್ಟಿಪ್ರಕರಣೇ ಪ್ರಜಾಪತಿರ್ಮನುಷ್ಯಾದಿ ಪಿಪೀಲಿಕಾಂತ ಪ್ರಾಣಿನಾಂ ಚತುರ್ವರ್ಣಾಭಿಮಾನಿ ದೇವತಾನಾಂ ಚ ಸೃಷ್ಟಿಮಾಮ್ನಾಯಾತ್ಯುಗ್ರಮಪಿ ಕ್ಷತ್ರಿಯಾದಿಕಂ ನಿಯಂತುಂ ಸಮರ್ಥಸ್ಯ ಧರ್ಮಸ್ಯ ಸೃಷ್ಟಿರಾಮ್ನಾಯತೇ . . . ಅಹೋ ಮಹದಿದಂ ಧರ್ಮಸ್ಯ ಸಾಮರ್ಥ್ಯಂ | ಯತ್ ಕ್ಷತ್ರಿಯಾದಿರುಗ್ರೋ ಮಾರಣೇ ಸಮರ್ಥೋಽಪಿ ಧರ್ಮಾದ್ಭೀತಃ ಕರಪ್ರದಾನಾದ್ಯನುಪಯೋಗಿನಂ ಯಾಚಕಂ ವಿಪ್ರಾದಿಕಂ ನ ತಾಡಯತಿ—ಪ್ರತ್ಯುತ ತಸ್ಮೈ ಧನಂ ದದಾತಿ | ಭಟಾಶ್ಚಾತಿಶೂರಾ ಧನುಃ ಖಡ್ಗಾದಿಧಾರಿಣೋ ಲಕ್ಷಸಂಖ್ಯಾಕಾ ಏಕೇನ ನಿರಾಯುಧೇನ ಸ್ವಾಮಿನಾ ವಿಕ್ಷಿಪ್ಯಮಾಣಾಸ್ತಾಡ್ಯಮಾನಾಸ್ಸಂತೋಽಪಿ ಸ್ವಾಮಿದ್ರೋಹಾ ದ್ಬಿಭ್ಯತಿ || ತತೋ ಧರ್ಮಾದಪ್ಯುತ್ಕೃಷ್ಟಂ ನ ಕಿಂಚಿನ್ನಿಯಾಮಕಮಸ್ತಿ ||

[ವಾಜಸನೇಯ ಬ್ರಾಹ್ಮಣವೆಂಬ ವೇದಭಾಗದ ಸೃಷ್ಟಿಪ್ರಕರಣದಲ್ಲಿ ಪ್ರಜಾಪತಿ ಬ್ರಹ್ಮನು ಮನುಷ್ಯ ಮೊದಲ್ಗೊಂಡು ಇರುವೆಗಳ ವರೆಗಿನ ಪ್ರಾಣಿಗಳನ್ನೂ ಚತುರ್ವರ್ಣಾಭಿಮಾನಿಗಳಾದ ದೇವತೆಗಳನ್ನೂ ಸೃಷ್ಟಿ ಮಾಡಿದ ಬಗೆಯನ್ನು ಹೇಳಿದ ಬಳಿಕ, ಅತ್ಯುಗ್ರರಾದ ಕ್ಷತ್ರಿಯಾದಿಗಳನ್ನು ಸಹ ಕಟ್ಟಿನಲ್ಲಿಡಲು ಸಮರ್ಥವಾದ ಧರ್ಮದ ಸೃಷ್ಟಿಯು ಹೇಳಲ್ಪಟ್ಟಿದೆ. . . ಆಹಾ ! ಈ ಧರ್ಮದ ಸಾಮರ್ಥ್ಯವು ಮಹತ್ತರವಾದುದು. ಅದರ ಭೆಸೆಯಿಂದಲೇ ಶೂರನೂ ಸಂಹಾರಶಕ್ತಿಯುಳ್ಳವನೂ ಆದ ರಾಜನು,

ತೆರಿಗೆ ಸುಂಕಗಳನ್ನು ಕೊಡುವ ಯೋಗ್ಯತೆಯಿಲ್ಲದೆ ಯಾಚಕನಾಗಿ ಬರುವ ಬ್ರಾಹ್ಮಣನನ್ನು ಹೊಡೆದು ಓಡಿಸದೆ, ಆತನಿಗೆ ತಾನೇ ದಕ್ಷಿಣೆಗಳನ್ನು ಕೊಡುತ್ತಾನೆ. ವೀರರೂ ಶಸ್ತ್ರಾಸ್ತ್ರಧಾರಿಗಳೂ ಆದ ಲಕ್ಷಮಂದಿ ಸೈನಿಕರು ನಿರಾಯುಧನೂ ಒಬ್ಬಂಟಿಗನೂ ಆದ ತಮ್ಮ ಒಡೆಯನು ತಮ್ಮನ್ನು ಬೈದು ಹೊಡೆಯುತ್ತಿದ್ದರೂ ಅವನಿಗೆ ವಂಚನೆ ಮಾಡಲು ಹೆದರುವರು. ಆದಕಾರಣ ಧರ್ಮಕ್ಕಿಂತ ಉತ್ಕೃಷ್ಟವಾದ ನಿಯಾಮಕವು ಯಾವುದೂ ಇಲ್ಲ.]

ರಾಜಸಿಂಹಾಸನದ ಪಾದಗಳಿರುವುದು ಪ್ರಜೆಯ ಹೃದಯದಲ್ಲಿ. ಪ್ರಜಾಹೃದಯದ ಸಾರಾಂಶವಿರುವುದು ಅದರ ಸತ್ತ್ವಗುಣ ಕಾರ್ಯವಾದ ಧರ್ಮಪ್ರೇರಣೆಯಲ್ಲಿ.

---

# ೬. ಧರ್ಮಕ್ಕಾಗಿ ರಾಜ್ಯ

ಹೀಗೆ ಸಮಾಜಕ್ಕೆಲ್ಲ ನಿಯಾಮಕನಾದ ರಾಜನಿಗೂ ಸಹ ನಿಯಾಮಕವಾಗಿ, ಎಲ್ಲ ಶಕ್ತಿಗಳಿಗಿಂತ ದೊಡ್ಡದಾಗಿರುವ ರಾಜ ಶಕ್ತಿಗೇ ಮೂಲವಾದ ಧರ್ಮವೆಂಬುದಾದರೋ ಸಮಾಜ ದಲ್ಲಿಯೇ ನೆಲಸಿರುವುದಲ್ಲದೆ ಬೇರೊಂದೆಡೆಯಲ್ಲಲ್ಲ. ಮನುಷ್ಯ ಜೀವನದ ಎಲ್ಲ ಕ್ರಿಯೆಗಳಿಗೂ ಸಂಬಂಧಪಟ್ಟ ವಿಧಿನಿಷೇಧಗಳ ಸಮೂಹವೇ ಧರ್ಮವೆನಿಸಿಕೊಂಡಿರುವುದು. ಧರ್ಮದ ಸ್ವರೂಪ ವೆಂತಹುದೆಂಬುದನ್ನು ಮನುಗಳು ಹೀಗೆ ವಿವರಿಸಿರುವರು :—

(೧) ವಿದ್ವದ್ಭಿಸ್ಸೇವಿತಸ್ಸದ್ಭಿರ್ನಿತ್ಯಮದ್ವೇಷರಾಗಿಭಿಃ |
ಹೃದಯೇನಾಭ್ಯನುಜ್ಞಾತೋ ಯೋ ಧರ್ಮಸ್ತಂ ನಿಬೋಧತ ||

(೨) ವೇದೋಽಖಿಲೋ ಧರ್ಮಮೂಲಂ ಸ್ಮೃತಿಶೀಲೇಚ ತದ್ವಿದಾಂ |
ಆಚಾರಶ್ಚೈವ ಸಾಧೂನಾಮಾತ್ಮನಸ್ತುಷ್ಟಿರೇವ ಚ ||

(೩) ವೇದಃ ಸ್ಮೃತಿಸ್ಸದಾಚಾರಃ ಸ್ವಸ್ಯ ಚ ಪ್ರಿಯಮಾತ್ಮನಃ |
ಏತಚ್ಚತುರ್ವಿಧಂ ಪ್ರಾಹುಸ್ಸಾಕ್ಷಾದ್ಧರ್ಮಸ್ಯ ಲಕ್ಷಣಂ ||

(೧) ವಿದ್ವಾಂಸರೂ ಕಾಮಕ್ರೋಧಗಳಿಲ್ಲದವರೂ ಆದ ಸಜ್ಜನರು ಯಾವ ನಿಯಮವನ್ನು ಯಾವಾಗಲೂ ಅನುಸರಿಸುವರೋ ಮತ್ತು ಅಂತಃ ಕರಣವು ಯಾವುದನ್ನು ಸಾಧುವೆಂದು ತೋರಿಸುವುದೋ ಅದೇ ಧರ್ಮವು. (೨) ಧರ್ಮವನ್ನು ತಿಳಿದುಕೊಳ್ಳುವುದಕ್ಕೆ ಶ್ರುತಿಗಳು, ಸ್ಮೃತಿಗಳು, ಅವು ಗಳನ್ನು ತಿಳಿದವರ ನಡೆವಳಿಕೆಗಳು, ಮತ್ತು ತನ್ನ ಮನಸ್ಸಿನ ಸಮ್ಮತಿ—ಇವೇ ಇರುವ ಆಧಾರಗಳು. (೩) ವೇದ, ಧರ್ಮಶಾಸ್ತ್ರ, ಶಿಷ್ಟಾಚಾರ, ತನ್ನ ಆತ್ಮದ ಇಷ್ಟಹಿತ—ಈ ನಾಲ್ಕು ಧರ್ಮಕ್ಕಿರುವ ಪ್ರಮಾಣಗಳು.

ಧರ್ಮವೆಂದರೆ ಮನುಷ್ಯನು ತನ್ನ ನಡೆನುಡಿಗಳನ್ನು ಹೇಗಿಟ್ಟುಕೊಂಡಿರುವುದು ಸರಿಯೋ—ಎಂದರೆ ಉಚಿತವೋ, ಅಥವಾ ಅತ್ಯಂತ ಹಿತಕರವೋ—ಅದನ್ನು ತಿಳಿಸುವ ನಿಯಮಗಳ ಅಥವಾ ಕಟ್ಟುಪಾಡುಗಳ ಸಮುಚ್ಚಯ. ಈ ನೀತಿ ನಿಯಮ ಗಳು ಸಾಮಾನ್ಯವಾಗಿ ಎರಡು ತೆರನಾದುವು ; (೧) ಪೂರ್ವಿಕರು

ಹೇಳಿರುವ ಮಾತುಗಳು ಮತ್ತು ಅವರು ಬಳಕೆಯಲ್ಲಿಟ್ಟಿರುವ ಏರ್ಪಾಟುಗಳು ; (೨) ಲೋಕದಲ್ಲಿ ಬುದ್ಧಿಶಾಲಿಗಳೆನ್ನಿಸಿಕೊಂಡವರು ಹೊಸ ಹೊಸ ಸಂದರ್ಭಗಳನ್ನು ವಿಚಾರಮಾಡಿ ಉಚಿತವೆಂದು ಬೋಧಿಸುವ ತಿದ್ದುಪಾಟು (ರಿಫಾರಮ್)ಗಳು. ಪೂರ್ವಪದ್ಧತಿ, ಸಾಮಯಿಕ ಪರಿಷ್ಕಾರ—ಈ ಎರಡನ್ನು ಬಿಟ್ಟರೆ ನಮ್ಮ ನಡವಳಿಕೆಗಳನ್ನು ಸರಿಪಡಿಸಬಲ್ಲ ನೀತಿದರ್ಶಕವು ಬೇರೆ ಯಾವುದೂ ಇರುವುದಿಲ್ಲ. ಇದು ಹಿಂದೂಗಳಿಗೆ ಮಾತ್ರವೇ ಅಲ್ಲ, ಪ್ರಪಂಚದ ಎಲ್ಲ ಜನಾಂಗಗಳಿಗೂ ಅನ್ವಯಿಸತಕ್ಕದ್ದು. ಮನುಷ್ಯನು ದೊಡ್ಡವನಾದಮೇಲೆ ಸ್ವಸಾಮರ್ಥ್ಯದಿಂದ ಎಷ್ಟು ಸಂಪತ್ತನ್ನು ಗಳಿಸಿದರೂ ಅವನ ದೇಹವು ಮೊದಲು ಬೆಳೆದದ್ದು ಸ್ವಾರ್ಜಿತ ದ್ರವ್ಯದಿಂದ ಅಲ್ಲ; ಅವನ ತಾಯಿತಂದೆಗಳ ಅಂಶದಿಂದ ಮತ್ತು ಅವರಿಟ್ಟ ಅನ್ನವಸ್ತ್ರಗಳಿಂದ. ಯಾವ ಜನರೇ ಆಗಲಿ, ಅವರು ಸ್ವತಂತ್ರವಾಗಿ ಎಷ್ಟು ಹೊಸ ನೀತಿನಿಯಮಗಳನ್ನು ಕಲ್ಪಿಸಿಕೊಂಡರೂ, ಅವುಗಳಿಗಿಂತ ಹಿಂದಿನ ಕಾಲದಲ್ಲಿ ಅವರು ಅನುಸರಿಸುತ್ತಿದ್ದದ್ದು ತಮ್ಮ ಹಿಂದಿನವರಿಂದ ಬಂದಿದ್ದ ಆಚಾರನಿಯಮಗಳನ್ನೇ. ಪೂರ್ವಿಕರ ಶಾಸ್ತ್ರಸಂಪ್ರದಾಯಗಳನ್ನೂ ಭಾಷಾವಿಧಾನ ಜೀವನವಿಧಾನಗಳನ್ನೂ ಸಂಪೂರ್ಣವಾಗಿ ತ್ಯಜಿಸಿಬಿಟ್ಟು, ಆಹಾರ ವ್ಯವಹಾರ ನಡೆನುಡಿಗಳನ್ನೆಲ್ಲವನ್ನೂ ಹೊಸದಾಗಿ ಸ್ವತಂತ್ರವಾಗಿ ನಿರ್ಮಾಣಮಾಡಿಕೊಳ್ಳುವುದು ಯಾವ ದೇಶದವರಿಂದಲೂ ಆಗಲಾರದು. ಉಳುವ ಹೊಲಗದ್ದೆಗಳನ್ನೂ, ಉತ್ತು ಬೆಳೆಯುವ ಕ್ರಮಗಳನ್ನೂ, ತಿನ್ನುವ ಆಹಾರವಸ್ತುಗಳ ಜ್ಞಾನವನ್ನೂ ಹೇಗೆ ನಾವು ಪೂರ್ವಿಕರಿಂದಲೇ ಪಡೆದುಕೊಂಡಲ್ಲದೆ ಬೇರೆ ಮಾರ್ಗವಿಲ್ಲವೋ, ಹಾಗೆಯೇ ನಾವು ಬಾಳುವ ರೀತಿನೀತಿಗಳನ್ನೂ ಬಹುಮಟ್ಟಿಗೆ ಹಿರಿಯರಿಂದಲೇ ಕಲಿತುಕೊಳ್ಳದೆ ಆಗುವುದೇ ಇಲ್ಲ. ಒಂದು ವೇಳೆ ಎಲ್ಲವನ್ನೂ ನೂತನವಾಗಿಯೇ ಸೃಷ್ಟಿಮಾಡಿಕೊಳ್ಳಬೇಕೆಂದು ನಮಗೆ ಆಶೆಯಿದ್ದರೂ ಅದು ಸಾಧ್ಯವಾಗದು. ಹೀಗೆ, ನಮ್ಮ ಇಂದಿನ ಜೀವನರೀತಿಗೂ

ಜ್ಞಾನಕ್ಕೂ ಮೂಲಾಧಾರವಾಗಿದ್ದು, ನಮ್ಮ ಮುಂದಿನ ಜ್ಞಾನ
ಸಂಪತ್ತುಗಳಿಗೆ ತಳಹದಿಯಾಗಬೇಕಾಗಿರುವ ಪೂರ್ವಿಕವಚನ
ವೃದ್ಧಾಚಾರಗಳನ್ನೇ ಶ್ರುತಿಸ್ಮೃತಿಗಳೆಂಬ ಪದವು ಸೂಚಿಸು
ತ್ತದೆ. ಯಾವ ವಿಧಿನಿಷೇಧವಾಕ್ಯಗಳು ಪ್ರತಿಯೊಂದು ದೇಶದ
ಲ್ಲಿಯೂ ಪ್ರತಿಯೊಂದು ಸಮಾಜದಲ್ಲಿಯೂ ಬಹು ಹಿಂದಿನ
ಕಾಲದಿಂದ ಅಂಗೀಕೃತವಾಗಿ ಬೆಳೆದುಕೊಂಡು ಬಂದಿರುತ್ತ
ವೆಯೋ ಅಂತಹ ಗ್ರಂಥಗಳಿಗೆಲ್ಲ ನಮ್ಮ ವೇದಶಾಸ್ತ್ರಗಳೆಂಬ
ಮಾತು ಉಪಲಕ್ಷಣವೆಂದು ಹೇಳಬಹುದು.

ಆದರೆ ದೇಶಭೇದದಿಂದಲೂ ಕಾಲಭೇದದಿಂದಲೂ ಪೂರ್ವಿಕ
ವಚನ ವೃದ್ಧಾಚಾರಗಳು ಸಾಲದೆಹೋಗುವ—ಎಂದರೆ ಅವು
ಅನ್ವಯಿಸಲಾರದ, ಅಥವಾ ಅವು ಅನ್ವಯಿಃಸಬಹುದೆಂಬ ವಿಷಯ
ದಲ್ಲಿ ಸಂಶಯಕ್ಕೆ ಆಸ್ಪದಕೊಡುವ—ಸಂದರ್ಭಗಳು ಒಂದೊಂದು
ಸಾರಿ ಕಾಣಿಸಿಕೊಳ್ಳಬಹುದು. ಇಂಥ ಸಂದರ್ಭಗಳಲ್ಲಿ ಪೂರ್ವಾ
ಚಾರಗಳ ಮರ್ಮವನ್ನರಿತು, ಕಾಮಕ್ರೋಧಗಳಿಲ್ಲದೆ, ಕೇವಲ
ಲೋಕಹಿತಬುದ್ಧಿಯಿಂದಲೇ ಪ್ರವರ್ತಿಸುವ ಪಂಡಿತರ ತೀರ್ಮಾ
ನವು ಧರ್ಮವಾಗುವುದು. ಇದೇ ತತ್ತ್ವವನ್ನೇ ಈ ಉಪನಿಷ
ದ್ವಾಕ್ಯವು ಪ್ರತಿಪಾದಿಸುತ್ತದೆ:—

ಅಥ ಯದಿ ತೇ ಕರ್ಮವಿಚಿಕಿತ್ಸಾ ವಾ ವೃತ್ತವಿಚಿಕಿತ್ಸಾ ವಾ ಸ್ಯಾತ್ |
ಯೇ ತತ್ರ ಬ್ರಾಹ್ಮಣಾಃ ಸಂಮರ್ಶಿನಃ | ಯುಕ್ತಾ ಆಯುಕ್ತಾಃ | ಅಲೂಕ್ಷಾ
ಧರ್ಮಕಾಮಾಃ ಸ್ಯುಃ | ಯಥಾ ತೇ ತೇಷು ವರ್ತೇರನ್ | ತಥಾ ತೇಷು
ವರ್ತೇಥಾಃ ||

(ನಿನಗೆ ಕರ್ತವ್ಯವನ್ನು ಕುರಿತಾಗಲಿ ನಡವಳಿಕೆಯನ್ನು ಕುರಿತಾಗಲಿ
ಸಂದೇಹವುಂಟಾದರೆ, ಆಗ ಅಲ್ಲಿ ಯಾವ ಬ್ರಾಹ್ಮಣರು ವಿಚಾರಶೀಲ
ರಾಗಿಯೂ, ಯೋಗ್ಯರಾಗಿಯೂ, ಅಕ್ರೂರರಾಗಿಯೂ, ಧರ್ಮದಲ್ಲಿ ಆಸಕ್ತಿ
ಯುಳ್ಳವರಾಗಿಯೂ ಇರುವರೋ, ಅಂಥವರು ಆಯಾ ಸಂದಿಗ್ಧ ಸಂದರ್ಭ
ಗಳಲ್ಲಿ ಹೇಗೆ ಹೇಗೆ ನಡೆದುಕೊಳ್ಳುವರೋ ಹಾಗೆ ಹಾಗೆ ನೀನು
ನಡೆದುಕೊಳ್ಳತಕ್ಕದ್ದು.)

ಮನುಷ್ಯನು ಎಷ್ಟೇ ಬುದ್ಧಿವಂತನಾದರೂ (೧) (ಮೇಲೆ ವಿವರಿಸಿರುವಂತೆ) ಅವನ ಬುದ್ಧಿಯು ಆಮೂಲಾಗ್ರವಾಗಿ ಸ್ವತಂತ್ರಿಸಿ ಕೆಲಸಮಾಡುವುದು ಅಸಾಧ್ಯವಾದದ್ದರಿಂದಲೂ, (೨) ಒಂದು ವೇಳೆ ಅದು ಸ್ವಲ್ಪ ದೂರ ಸ್ವತಂತ್ರಿಸಿ ಕೆಲಸ ಮಾಡಬಹುದಾದರೂ ಇಂಥ ಸ್ವತಂತ್ರಕಾರ್ಯವು ಮನುಷ್ಯ ಮಾತ್ರನಿಗೆ ಸಹಜವಾಗಿರುವ ಕಾಮ ಕ್ರೋಧ ಮೋಹ ಲೋಭಾದಿಗಳಿಂದ ಕೆಟ್ಟುಹೋಗಬಹುದಾದದ್ದರಿಂದಲೂ, (೩) ಅಥವಾ ಹಾಗೊಂದು ವೇಳೆ ಕೆಡದಿದ್ದರೂ ಅವನಿಗೆ ತಕ್ಕಷ್ಟು ಜ್ಞಾನಾನುಭವಗಳೂ ಇತರ ಪ್ರಮಾಣಗಳ ಸಾಹಾಯ್ಯವೂ ಇಲ್ಲದ ಕಾರಣದಿಂದ ಅವನ ಆ ಸ್ವತಂತ್ರಕಾರ್ಯದಲ್ಲಿ ಭ್ರಾಂತಿ ಪ್ರಮಾದಗಳಿರಬಹುದಾದದ್ದರಿಂದಲೂ, ಈಚಿನ ಜನರು ಮಾಡುವ ಸುಧಾರಣೆ ಅಥವಾ ತಿದ್ದುಪಾಟು ಕೂಡಿದ ಮಟ್ಟಿಗೂ ವೃದ್ಧಾಚಾರಕ್ಕನುಗುಣವಾಗಿರುವುದೇ ಲೇಸೆಂಬ • ಅಭಿಪ್ರಾಯದಿಂದಲೇ, ಸಂದಿಗ್ಧ ವಿಚಾರಗಳಲ್ಲಿ ಸ್ವತಂತ್ರವಾಗಿ ಹೊಸ ತೀರ್ಮಾನಕೊಡಲು ವೇದಶಾಸ್ತ್ರಗಳನ್ನರಿತು ಪೂರ್ವಸಂಪ್ರದಾಯಗಳಲ್ಲಿ ಆದರವುಳ್ಳ ವಿದ್ವಾಂಸರೇ ಅರ್ಹರೆಂದು ಮೇಲಿನ ಶ್ರುತಿಸ್ಮೃತಿವಾಕ್ಯಗಳು ವಿಧಿಸಿರುವಂತೆ ತೋರುತ್ತದೆ.

ಅಂತೂ ಇಂತೂ ಸಮಾಜದ ಮಹಾಜನವೇ ಧರ್ಮಕ್ಕೆ ನೆಲೆಮನೆಯೆಂದು ಹೇಳಿದಹಾಗಾಯಿತು. ಶ್ರುತಿಸ್ಮೃತಿಗಳು ರಾಜನಿಗೆ ಅಧೀನವಾದವುಗಳಲ್ಲ; ಸಂದಿಗ್ಧಪ್ರಕರಣಗಳಲ್ಲಿ ಹೊಸ ನಿಯಮಗಳನ್ನು ಕಲ್ಪಿಸುವ ಶಿಷ್ಟರೂ ರಾಜನಿಗಧೀನರಲ್ಲ. ಶ್ರುತಿಸ್ಮೃತಿಗಳನ್ನು ಪ್ರಚಾರಗೊಳಿಸುವ ವಿದ್ವಾಂಸರೂ, ಅವುಗಳನ್ನು ಅನುಷ್ಠಾನದಲ್ಲಿ ತೋರಿಸುವ ಕುಲವೃದ್ಧರೂ, ಪೂರ್ವಪದ್ಧತಿಗಳ ರಹಸ್ಯವನ್ನರಿತು ಅವುಗಳನ್ನು ತಿದ್ದುವ ತತ್ತ್ವದರ್ಶಿಗಳೂ—ಇವರೆಲ್ಲರೂ ಮಹಾಜನರೆನ್ನಿಸಿಕೊಳ್ಳುವರು. ಇವರು ಸಮಾಜಕ್ಕೆ ಸೇರಿದವರು: ಸಮಾಜವು ಇವರಲ್ಲಿ ವಿಶ್ವಾಸವನ್ನಿಟ್ಟು ಇವರ ಉಪದೇಶಗಳನ್ನನುಸರಿಸುತ್ತದೆ. ಹೀಗೆ

ಅವರು ವಾಸ್ತವವಾಗಿ ಜನತೆಯ ಪ್ರತಿನಿಧಿಗಳು. ಹೀಗಿರಲಾಗಿ, ಪೂರ್ವಿಕ ವಚನದಿಂದಲೂ ಶಿಷ್ಟಾಚಾರದಿಂದಲೂ ತತ್ತ್ವಶೋಧಕರ ಬೋಧನೆಯಿಂದಲೂ ಯಾವ ನಿಯಮ ಪರಿಷ್ಕರಣೆಗಳನ್ನು ಸಮಾಜವು ಅಂಗೀಕರಿಸಿಕೊಳ್ಳುವುದೋ ಅದೇ ಧರ್ಮ. ಇಂಥ ಧರ್ಮವನ್ನನುಸರಿಸಿ ಅದರ ಸೇವೆಗೋಸ್ಕರ ಅಧಿಕಾರವನ್ನು ಪಡೆದಿರುವವನೇ ರಾಜನು. ರಾಜನು ಧರ್ಮಾಧೀನನು; ಧರ್ಮವು ಸಮಾಜಾಧಿಷ್ಠಿತವಾದದ್ದು; ಆದದ್ದರಿಂದ ರಾಜ್ಯಶಕ್ತಿಯ ಮೂಲಸ್ಥಾನವು ಸಮಾಜದ ಧಾರ್ಮಿಕ ಭಾವನೆಗಳಲ್ಲಿಯೇ ಇರುವುದೆಂಬುದು ಸಿದ್ಧಾಂತ. ಸಮಾಜದ ಧರ್ಮಾಸಕ್ತಿಗೆ ರಾಜಪದವಿಯು ಉಪಕರಣಮಾತ್ರವಾಗಿರುತ್ತದೆ. ಸಮಾಜವು ತನ್ನ ಧರ್ಮವನ್ನು ಬಿಟ್ಟರೆ, ಅಥವಾ ಬದಲಾಯಿಸಿದರೆ, ರಾಜನ ಶಕ್ತಿಗೆ ವ್ಯತ್ಯಾಸವು ಹಿಂದುಗೂಡಿ ಬರಲೇಬೇಕು. ಸಮಾಜವು ಯಾವುದನ್ನು ಧರ್ಮವೆಂದು ತಾನಾಗಿ ಅಂಗೀಕರಿಸಿಕೊಂಡಿರುವುದೋ ಅದನ್ನು ಕಾಪಾಡಲು ರಾಜದಂಡವೆಂಬೊಂದಾಯುಧವನ್ನೂ ಸಮಾಜವೇ ಆ ಅಂಗೀಕಾರದ ಒಂದು ಭಾಗವಾಗಿ ಇರಿಸಿಕೊಂಡಿರುತ್ತದೆ.

---

## ೭. ರಾಜ್ಯದ ಸ್ವಾಮಿತ್ವ

### ಆರ್ಯಮತ

ರಾಜಪದವಿಯ ತಳಹದಿಯು ಹೀಗೆ ಸಮಾಜದ ಹೃದಯ ದಲ್ಲಿರುವುದೆಂಬುದು ತರ್ಕಮಾಡಿ ಅನುಮಾನಿಸಿ ತೆಗೆಯಬೇಕಾದ ಮಾತೇನೂ ಅಲ್ಲ. ರಾಜನಾಗತಕ್ಕವನಿಗೆ ಪಟ್ಟಾಭಿಷೇಕ ಮಾಡುವ ಸಮಯದಲ್ಲಿ ಹೇಳಬೇಕಾದ ಈ ವೇದಮಂತ್ರ ದಿಂದಲೇ ಅದು ಸ್ಪಷ್ಟವಾಗುತ್ತದೆ:—

ವಿಶಸ್ತ್ವಾ ಸರ್ವಾ ವಾಂಛಂತು |
ಮಾತ್ವದ್ರಾಷ್ಟ್ರಮಧಿಭ್ರಶತ್ ||

[ಪ್ರಜೆಗಳೆಲ್ಲರೂ ನಿನ್ನನ್ನು ಬಯಸಲಿ ; ಈ ರಾಷ್ಟ್ರವು ನಿನ್ನನ್ನು ಬಿಡದಿರಲಿ.]

ಸಾಂಗ್ರಹಣ್ಯೇಷ್ಟ್ಯಾಯಜತೇ | ಇಮಾಂ ಜನತಾಗ್ಂ ಸಂಗೃಹ್ಣಾನೀತಿ ||

[ಸಾಂಗ್ರಹಣಿ ಎಂಬ ಯಜ್ಞವನ್ನು ಮಾಡತಕ್ಕದ್ದು—ಈ ಜನತೆಯನ್ನು ಸಂಗ್ರಹಿಸಿಕೊಳ್ಳಬೇಕೆಂದು.]

ಪ್ರಜಾಶಕ್ತಿದ್ಯೋತಕವಾದ ಇಂಥ ವಾಕ್ಯಗಳು ವೇದದಲ್ಲಿ ಹತ್ತಾರು ಕಡೆ ಇವೆ. ಅದಕ್ಕೆ ತಕ್ಕಂತೆ, ಶ್ರೀಮದ್ರಾಮಾಯಣ ದಲ್ಲಿ ದಶರಥನು ರಾಮಚಂದ್ರನಿಗೆ ಯೌವರಾಜ್ಯವನ್ನು ಕೊಡ ಬೇಕೆಂದುದ್ದೇಶಿಸಿ,

ನಾನಾ ನಗರ ವಾಸ್ತವ್ಯಾನ್ ಪೃಥಗ್ಜಾನಪದಾನಪಿ |
ಸಮಾನಿನಾಯ ಮೇದಿನ್ಯಾಃ ಪ್ರಧಾನಾನ್ ಪೃಥಿವೀಪತೀನ್ ||
ತತಃ ಪರಿಷದಂ ಸರ್ವಾಮ್ ಆಮಂತ್ರ್ಯ ವಸುಧಾಧಿಪಃ |
ಹಿತಮುದ್ಧರ್ಷಣಂ ಚೈವಮ್ ಉವಾಚ ಪ್ರಥಿತಂ ವಚಃ ||
ಸೋಽಹಂ ವಿಶ್ರಮಮಿಚ್ಛಾಮಿ ಪುತ್ರಂ ಕೃತ್ವಾ ಪ್ರಜಾಹಿತೇ |
ಸನ್ನಿಕೃಷ್ಟಾನಿಮಾನ್ ಸರ್ವಾನ್ ಅನುಮಾನ್ಯ ದ್ವಿಜರ್ಷಭಾನ್ ||
ಯದೀದಂ ಮೇಽನುರೂಪಾರ್ಥಂ ಮಯಾ ಸಾಧು ಸುಮಂತ್ರಿತಂ |
ಭವಂತೋ ಮೇಽನುಮನ್ಯಂತಾಂ ಕಥಂ ವಾ ಕರವಾಣ್ಯಹಂ ||

. . . . . . . . . . . . .

ತಸ್ಯ ಧರ್ಮಾರ್ಥವಿದುಷಃ ಭಾವಮಾಜ್ಞಾಯ ಸರ್ವಶಃ |
ಬ್ರಾಹ್ಮಣಾ ಜನಮುಖ್ಯಾಶ್ಚ ಪೌರಜಾನಪದೈಸ್ಸಹ ||
ಊಚುಶ್ಚ ಮನಸಾ ಜ್ಞಾತ್ವಾ ವೃದ್ಧಂ ದಶರಥಂ ನೃಪಂ |
ತಮೇವಂ ಗುಣಸಂಪನ್ನಂ ರಾಮಂ ಸತ್ಯಪರಾಕ್ರಮಂ ||
ಆಶಂಸತೇ ಜನಸ್ಸರ್ವಃ ರಾಷ್ಟ್ರೇ ಪುರವರೇ ತಥಾ |
ಆಭ್ಯಂತರಶ್ಚ ಬಾಹ್ಯಶ್ಚ ಪೌರಜಾನಪದೋ ಜನಃ || ಇತ್ಯಾದಿ.

ನಾನಾ ಪಟ್ಟಣಗಳ ಜನರನ್ನೂ, ದೇಶದಲ್ಲಿಯ ಬೇರೆ ಬೇರೆ ಪ್ರಜಾವರ್ಗಗಳನ್ನೂ ಮುಖ್ಯಮುಖ್ಯರಾದ ರಾಜರುಗಳನ್ನೂ ಕರೆಯಿಸಿ ಸಭೆಮಾಡಿ, ಅವರನ್ನು ಕುರಿತು—"ಎಲೈ ಸಭಾಸದರೆ, ನಾನು ಈ ನನ್ನ ಜೀರ್ಣವಾದ ಶರೀರಕ್ಕೆ ವಿಶ್ರಾಂತಿಯನ್ನು ಬಯಸುತ್ತಿದ್ದೇನೆ. ನನ್ನ ಪೂರ್ವಿಕರು ಮಗನನ್ನು ಸಲಹಿದಂತೆ ಸಲಹುತ್ತಿದ್ದ ಈ ರಾಜ್ಯವನ್ನು, ಇಲ್ಲಿ ನೆರೆದಿರುವ ಬ್ರಾಹ್ಮಣ ಶ್ರೇಷ್ಠರ ಅನುಮತಿಯಂತೆ, ನನ್ನ ಮಗನಿಗೆ ವಹಿಸಿಕೊಡಬೇಕೆಂದಿದ್ದೇನೆ. ನನ್ನ ಈ ಆಲೋಚನೆಯು ತಮ್ಮಗಳಿಗೆ ಸಾಧುವಾದದ್ದೆಂದು ತೋರಿದರೆ ನನಗೆ ತಮ್ಮ ಸಮ್ಮತಿಯನ್ನು ಅಪ್ಪಣೆ ಕೊಡಿಸೋಣವಾಗಲಿ."—ಹೀಗೆಂದು ದಶರಥ ಮಹಾರಾಯನು ಪ್ರಾರ್ಥಿಸಿದನು. ಅದನ್ನು ಕೇಳಿದ ಸಭಿಕರು ಅತ್ಯಂತ ಹರ್ಷವುಳ್ಳವರಾದರು. ಅದರಿಂದ ಹುಟ್ಟಿದ ಕೋಲಾಹಲನಾದವು ದಿಕ್ಕುಗಳನ್ನು ಅಲುಗಾಡಿಸುವಂತೆ ಇತ್ತು. ಆಗ ಬ್ರಾಹ್ಮಣರೂ ಜನಮುಖ್ಯರೂ (ಎಂದರೆ ಪ್ರಜಾಪ್ರತಿನಿಧಿಗಳೂ) ಪಟ್ಟಣ ಹಳ್ಳಿಗಳ ಪ್ರಜೆಗಳೂ ಕೂಡ ವೃದ್ಧನಾದ ದಶರಥನ ಅಭಿಪ್ರಾಯವನ್ನು ತಿಳಿದವರಾಗಿ, ರಾಮನ ಗುಣಾತಿಶಯಗಳನ್ನು ಪರಿಪರಿಯಾಗಿ ಕೊಂಡಾಡಿ, "ಆತನು ಸ್ವಜನರ ಯೋಗಕ್ಷೇಮವನ್ನು ವಿಚಾರಿಸುವಂತೆ ಪ್ರಜೆಗಳ ಯೋಗಕ್ಷೇಮಗಳನ್ನು ವಿಚಾರಿಸುತ್ತಿರುವನು ; ಆತನು ಪ್ರಜಾಪಾಲನ ತತ್ತ್ವಜ್ಞನು ; ಮುಖ್ಯ ನಗರಗಳಲ್ಲಿಯೂ ಗ್ರಾಮಗಳಲ್ಲಿಯೂ, ಒಳಗೂ ಹೊರಗೂ, ಪೌರರೂ ಜಾನಪದರೂ ರಾಮನನ್ನು ಹೊಗಳುತ್ತಿರುವರು ; ಆತನನ್ನು ಯುವರಾಜಪದವಿಯಲ್ಲಿ ನೋಡಲು ನಾವು ಆಶೆಯುಳ್ಳವರಾಗಿದ್ದೇವೆ. ಆತನಿಗೆ ತಾವು ಪಟ್ಟವನ್ನು ಕಟ್ಟಬಹುದು." —ಎಂದು ಹೇಳಿ ಅನುಮತಿಯನ್ನಿತ್ತರು. ಅದರಿಂದ ದಶರಥನು ಪರಮ ಸಂತುಷ್ಟನಾಗಿ, ಪಟ್ಟಾಭಿಷೇಕೋತ್ಸವಕ್ಕೆ ಬೇಕಾದುದನ್ನೆಲ್ಲ ಸಿದ್ಧಪಡಿಸಬೇಕೆಂದು ವಸಿಷ್ಠಾದಿ ಬ್ರಾಹ್ಮಣರಿಗೆ ಹೇಳಲು, ಆ ವಾಕ್ಯವನ್ನು ಕೇಳಿದ ಆ ಮಹಾಸಭೆಯಲ್ಲಿ ಮಹತ್ತಾದ ಜನಘೋಷವು ಉಂಟಾಯಿತು. ಕೆಲವು ಕಾಲದ ಮೇಲೆ ಆ ಜನಘೋಷವು ಶಾಂತವಾಗಲು ಮುಂದಿನ ಕಾರ್ಯಗಳು ನಡೆಯಲಾರಂಭವಾಯಿತು.

ಈ ಕಥೆಯ ವಿವರವನ್ನು ಕವಿಪಿತಾಮಹನಾದ ವಾಲ್ಮೀಕಿಯು ವಿಸ್ತಾರವಾಗಿ ಬಹು ಮನೋಹರವಾದ ರೀತಿಯಲ್ಲಿ ವರ್ಣಿಸಿರುತ್ತಾನೆ. ಆತನು ಉಪಯೋಗಿಸಿರುವ ಮಾತುಗಳೇ ರಾಜ್ಯವಿಷಯದಲ್ಲಿ ಪ್ರಜಾವರ್ಗಕ್ಕಿದ್ದ ಅಧಿಕಾರವನ್ನು ಚೆನ್ನಾಗಿ ಬೋಧಿಸುತ್ತವೆ. "ನಗರ ವಾಸ್ತವ್ಯ", "ಜಾನಪದ", "ಪೌರ", "ಪರಿಷದ", "ಅನುಮನನ", "ಅನುಮತಿ", "ಜನಮುಖ್ಯ", "ಪ್ರಜಾಪಾಲನ ತತ್ತ್ವಜ್ಞ", "ಜನಘೋಷ",—ಈ ಪದಗಳೆಲ್ಲವೂ ಪ್ರಜಾ ಪ್ರಾಧಾನ್ಯವನ್ನು ತೋರಿಸತಕ್ಕ ಪದಗಳು. "ಜಾನಪದ", "ಜನಘೋಷ" ಮುಂತಾದ ಪದಗಳಂತೂ ಪುನಃ ಪುನಃ ಪ್ರಯುಕ್ತವಾಗಿವೆ. ಇದರಿಂದ, ಪೂರ್ವಕಾಲದಲ್ಲಿ ಜನವಾಕ್ಯವು (ಪಬ್ಲಿಕ್ ಒಪಿನಿಯನ್) ನಮ್ಮ ದೇಶದಲ್ಲಿ ರಾಜಕೀಯ ಶಕ್ತಿಯುಳ್ಳದ್ದಾಗಿತ್ತೆಂಬುದು ಬರಿಯ ಊಹೆಯ ಮಾತಲ್ಲವೆಂದೂ, ಅದು ಇತಿಹಾಸ ಸಮರ್ಥಿತವಾದ ಸಿದ್ಧಾಂತವೆಂದೂ ಸ್ಪಷ್ಟವಾಗಿದೆ.

ಹಿಂದೂಗಳಲ್ಲಿ ವಾಸ್ತವವಾಗಿ ಸಮಾಜಕ್ಕಿಂತ ಮೇಲ್ಪಟ್ಟದ್ದೆನ್ನಿಸಿಕೊಂಡಿರುವ ಲೌಕಿಕ ವ್ಯಾಪಾರವು ಯಾವುದೂ ಇಲ್ಲವೆಂದು ತೋರುತ್ತದೆ. ಮನೆಯಲ್ಲಿ ಯಾವ ಕೆಲಸ ನಡೆಯಬೇಕಾದರೂ, ಮೊದಲು "ಮಹಾಜನೈಃ ಸಹ ಸ್ವಸ್ತಿ ಪುಣ್ಯಾಹವಾಚನಂ ಕರಿಷ್ಯೇ" ಎಂದು ಹೇಳುವುದು ಆರ್ಯರ ಸಂಪ್ರದಾಯ. ವಿವಾಹಕಾಲದಲ್ಲಿ ಹೆಣ್ಣಿನ ತಂದೆಯು ಸಭಿಕರನ್ನೆಲ್ಲಾ ಕುರಿತು "ಕನ್ಯಾದಾನಕ್ಕಪ್ಪಣೆಯೆ?" ಎಂದು ಕೇಳುವ ವಾಡಿಕೆಯು ಈಗಲೂ ಉಂಟು. ಹೀಗೆ ಗೃಹಕಾರ್ಯಗಳಲ್ಲಿ ಸಹ ಮಹಾಜನರ ಅಧಿಕಾರವನ್ನು ಅಂಗೀಕಾರಮಾಡಿಕೊಂಡಿದ್ದ ನಮ್ಮ ಪೂರ್ವಿಕರು ರಾಜ್ಯದಂಥ ದೊಡ್ಡ ವಿಷಯದಲ್ಲಿ ಮಹಾಜನರನ್ನು ಗಣನೆಗೆ ತಾರದೆ, ಎಲ್ಲ ಅಧಿಕಾರವನ್ನೂ ರಾಜನೆಂಬೊಬ್ಬ ನಿರಂಕುಶವ್ಯಕ್ತಿಯ ಕೈಯಲ್ಲೇ ಬಿಟ್ಟಿದ್ದರೆಂದು ಹೇಳುವುದು ಅತಿಸಾಹಸವಾದೀತು.

ಹೀಗೆ ರಾಜ್ಯಶಕ್ತಿಯು, ಅಥವಾ ಸ್ವಾಮ್ಯದ, ಅಥವಾ ರಾಜ್ಯಾಧಿಕಾರದ ಮೂಲವು ಪ್ರಜೆಗಳ, ಅಥವಾ ಸಮಾಜದ, ಒಪ್ಪಿಗೆಯಲ್ಲಿರುವುದೆಂಬುದು ಆರ್ಯಮತವೆಂದು ಸಿದ್ಧವಾಗುತ್ತದೆ. ಇದನ್ನು ಕನ್ನಡ ಕವಿಯೊಬ್ಬನು ಹೀಗೆ ತಿಳಿಸಿದ್ದಾನೆ.—

ಗುರು ದೈವಂ ವಿದ್ಯಾರ್ಥಿಗೆ |
ತರುಣಿಗೆ ಪತಿ ದೈವಮ್ ಉಳಿದ ಮನುಜರ್ಗೆಲ್ಲಂ ||
ಪೊರೆವನೆ ದೈವಂ ಜಗದೊಳಗ್ |
**ಅರಸಿಂಗಂ ಪ್ರಜೆಯೆ ದೈವವ್** ಎಲೆ ಗುಣರತ್ನಾ ||

## ಪಾಶ್ಚಾತ್ಯ ಮತ

ರಾಜ್ಯಶಕ್ತಿಗೆ ಮೂಲವಾವುದೆಂಬ ವಿಷಯದಲ್ಲಿ ಪಾಶ್ಚಾತ್ಯರಲ್ಲಿ ಬಹುದಿನಗಳಿಂದ ವಾದವಿವಾದಗಳು ಹೇರಳವಾಗಿ ನಡೆದುಕೊಂಡು ಬಂದಿವೆ. ಇಂಗ್ಲೆಂಡಿನಲ್ಲಿ ಬಹು ಹಿಂದಿನ ಕಾಲದಿಂದ ರಾಜನು ಮಹಾಜನರ ಇಷ್ಟವನ್ನನುಸರಿಸಿ ಆಳುವುದೇ ವಾಡಿಕೆಯಾಗಿ ಬಂದಿದ್ದರೂ, ಕ್ರಿಸ್ತಶಕ ಹದಿನೇಳನೆಯ ಶತಮಾನದಿಂದೀಚೆಗೆ ಬಂದ ದೊರೆಗಳು ತಾವು ದೈವಪ್ರಸಾದದಿಂದ (ಡಿವೈನ್ ರೈಟ್) ಪ್ರಭುಗಳಾದವರೆಂದೂ, ತಮ್ಮನ್ನು ಮಾತನಾಡಿಸಲು ಯಾವ ಮನುಷ್ಯನಿಗೂ ಅಧಿಕಾರವಿಲ್ಲವೆಂದೂ, ಭಗವಂತನ ಸಾಕ್ಷಾತ್ ಪ್ರತಿನಿಧಿಗಳೇ ತಾವೆಂದೂ ಕೊಚ್ಚಿಕೊಳ್ಳಲಾರಂಭಿಸಿದರು. ಇದರಿಂದ ಪ್ರಜಾವರ್ಗಕ್ಕೆ ಅಸಮಾಧಾನವುಂಟಾಗಿ ಕೆಲವು ಕಾಲದ ತರುವಾಯ ರಾಜ್ಯವಿಪ್ಲವ ನಡೆದು, ಆಮೇಲೆ ಪ್ರಜಾಪ್ರಮುಖರು ಬೇರೊಂದು ಮನೆತನದ ಅರಸುಮಗನನ್ನು ಕರೆಯಿಸಿ ಆತನಿಗೆ ಪಟ್ಟವನ್ನು ಕಟ್ಟಿದರು. ಈ ವ್ಯತ್ಯಾಸ ನಡೆದಬಳಿಕ (೧೬೮೮ ನೆಯ ಇಸ್ವಿ) ರಾಜ್ಯಶಕ್ತಿಯಿರುವುದು ಪ್ರಜೆಯಲ್ಲಿಯೇ ಎಂಬುದಕ್ಕೆ ಸಂದೇಹವಿಲ್ಲದಂತಾಯಿತು. ಹೊಸ ರಾಜನಿಗೆ ಪಟ್ಟಕಟ್ಟುವ ಕಾಲದಲ್ಲಿ ಇಂಗ್ಲೆಂಡಿನ ಜನರು ಪ್ರಕಟಪಡಿಸಿದ ಒಂದು ಪ್ರಜಾಸ್ವತ್ವನಿರೂಪಣೆಯಲ್ಲಿ

ತಮ್ಮ ಹಿಂದಿನ ದೊರೆಯು ಮಾಡಿದ್ದ ಅನ್ಯಾಯಗಳನ್ನು ಉದ್ಘೋ
ಟಿಸಿ, ಮುಂದಕ್ಕೆ ರಾಜನು ಪಾರ್ಲಿಮೆಂಟ್ ಸಭೆಯ ಅನುಮ
ಯಿಲ್ಲದೆ ಕಾನೂನುಗಳನ್ನು ತಿದ್ದಲಾಗದೆಂದೂ, ತೆರಿಗೆಗಳನ
ಹಾಕಲಾಗದೆಂದೂ, ಪಾರ್ಲಿಮೆಂಟಿನ ಸದಸ್ಯರುಗಳನ್ನು ಚುನ
ಯಿಸುವ ವಿಷಯದಲ್ಲಿ ರಾಜನು ಪ್ರವೇಶಿಸಲಾಗದೆಂದು
ಮುಂತಾಗಿ ಸಾರಿ, ತಮ್ಮ ಅಧಿಕಾರವನ್ನು ಸ್ಥಿರಪಡಿಸಿಕೊಂಡರ
ಅಲ್ಲಿಂದ ಕೆಲವು ವರ್ಷಗಳು ಕಳೆದಮೇಲೆ ಅಮೆರಿಕಾ ಖಂಡದ
ಹೊಸದಾಗಿ ಸ್ವಾಸ್ಥ್ಯಗಳನ್ನು ಕಟ್ಟಿಕೊಂಡು ನೆಲಸಿ
ಇಂಗ್ಲಿಷ್ ಜನರಿಗೂ ಇಂಗ್ಲೆಂಡ್ ದೇಶದ ಸರ್ಕಾರಕ್ಕೂ
ಕಲಹ ಬಂದು, ಕೊನೆಗೆ ಆ ಸ್ವಾಸ್ಥ್ಯಗಳವರು ತಾವೆ
"ಸಂಯುಕ್ತರಾಷ್ಟ್ರ"ವೆಂಬ (ಯುನೈಟೆಡ್ ಸ್ಟೇಟ್ಸ್) ಹೆಸರಿ
ಸ್ವತಂತ್ರರಾಜ್ಯವನ್ನು ಸ್ಥಾಪಿಸಿಕೊಂಡರು. ಆಗ (ಕ್ರಿ.ಶ.
೧೭೭೪) ಅವರು ಪ್ರಸಿದ್ಧಗೊಳಿಸಿದ ಸ್ವಾಧಿಕಾರ ನಿರೂಪ
ಯಲ್ಲಿ ಹೀಗೆ ಹೇಳಿರುವರು :—

ಸೃಷ್ಟಿಕರ್ತನು ಮನುಷ್ಯರಿಗೆ ಕೆಲವು ಪರಾಧೀನಪಡಿಸಲಾಗದ ಸ್ವ
(ಹಕ್ಕು)ಗಳನ್ನು ಅನುಗ್ರಹಿಸಿರುವನು ; ಜೀವಿಸುವಿಕೆ, ಸ್ವಾತಂತ್ರ್ಯ, ಸು
ಸಂಪಾದನೆಯ ಪ್ರಯತ್ನ—ಇವು ಆ ಹಕ್ಕುಗಳ ಪೈಕಿ. ಈ ಹಕ್ಕುಗಳನ
ಉಳಿಸುವುದಕ್ಕಾಗಿ ಜನಾಂಗಗಳಲ್ಲಿ ಸರಕಾರಗಳು ಏರ್ಪಟ್ಟಿರುತ್ತ
ಸರ್ಕಾರಗಳು ತಮ್ಮ ನ್ಯಾಯವಾದ ಅಧಿಕಾರಗಳನ್ನು ಆಳಲ್ಪಡತಕ್ಕ
(ಪ್ರಜೆಗಳ) ಅನುಮತಿಯಿಂದ ಪಡೆಯುತ್ತವೆ. ಯಾವಾಗ ಒಂದು ರಾ
ನಿರ್ವಾಹಕ್ರಮವು ಮೇಲಿನ ಉದ್ದೇಶಗಳಿಗೆ ಹಾನಿಯನ್ನುಂಟುಮಾ
ವುದಾಗಿರುವುದೋ ಆಗ ಅದನ್ನು ಬದಲಾಯಿಸುವುದಕ್ಕಾಗಲಿ, ಅದನ
ಕಿತ್ತುಹಾಕಿ ಬೇರೊಂದು ಹೊಸ ಸರ್ಕಾರವನ್ನು ಸ್ಥಾಪಿಸಿಕೊಳ್ಳುವ
ಕ್ಕಾಗಲಿ ಪ್ರಜೆಗಳಿಗೆ ಹಕ್ಕುಂಟು.

ಅಲ್ಲಿಂದೀಚೆಗೆ ಫ್ರಾನ್ಸು ದೇಶದಲ್ಲಿ ಮಹಾಕ್ರಾಂತಿಯೊಂ
ನಡೆಯಿತು (ಕ್ರಿ.ಶ. ೧೭೮೯). ಅಲ್ಲಿಯ ರಾಜನು—"ರಾಜ್ಯವೆ
ನಾನೇ ರಾಜ್ಯ" ಎಂದು ಹೇಳಿಕೊಳ್ಳುತ್ತ, ದೇಶವನ್ನೆ
ತನ್ನ ಖಾಸಗಿ ಸ್ವತ್ತಿನಂತೆ ಭಾವಿಸಿಕೊಂಡು, ಪ್ರಜಾ

ಕಾರವನ್ನು ಅಂಗೀಕರಿಸೆನೆಂದು ಶಪಥತೊಟ್ಟಿದ್ದನು. ಕಾಲಕ್ರಮದಲ್ಲಿ ರಾಜ್ಯಯಂತ್ರವು ಕೆಟ್ಟು, ಜನರಿಗೆ ಕಷ್ಟಗಳು ದುಸ್ಸಹವಾದ ಬಳಿಕ ಘೋರವಾದ ದಂಗೆಯಾಗಿ, ಕಡೆಗೆ ಪ್ರಜಾಪ್ರಭುತ್ವವು ಸ್ಥಾಪಿತವಾಯಿತು. ಯೂರೋಪು ಖಂಡದಲ್ಲಿ ಮೊದಲನೆಯ ಜಗದ್ಯುದ್ಧದಿಂದೀಚೆಗೆ (೧೯೧೪-೧೮) ರಷ್ಯಾ, ಜರ್ಮನಿ ಮೊದಲಾದ ಅನೇಕ ರಾಜ್ಯಗಳಲ್ಲಿ ಸಂಕ್ಷೋಭೆ ನಡೆದು, ರಾಜಪದವಿಯೇ ಲುಪ್ತವಾಗಿ, ಪ್ರಜಾಧಿಪತ್ಯವು ಏರ್ಪಟ್ಟಿದೆ. ಇದೆಲ್ಲವೂ ಚರಿತ್ರೆಯ ಮಾತಾಯಿತು.

ರಾಜ್ಯಶಾಸ್ತ್ರಶೋಧಕರು ಸಹ ರಾಜ್ಯಶಕ್ತಿಗೆ ಪ್ರಜೆಯೇ ಮೂಲಾಧಿಷ್ಠಾನವೆಂದು ಹೇಳಿರುವರು :—

ಒಂದು ದೇಶದ ಪ್ರಜೆಯ ಅಧಿಕಾಂಶವೇ ಒಂದರ್ಥದಲ್ಲಿ ಅಲ್ಲಿಯ ರಾಜ್ಯಾಧಿಕಾರದ ಪರಮ ನಿಧಿಯೆಂಬುದನ್ನು ನಾವು ಒಪ್ಪಲೇಬೇಕು . . . ಜನದ ದಂಗೆಯ ಭಯವು ಸರ್ಕಾರವನ್ನು ಹದ್ದಿನಲ್ಲಿಡುವುದೆಂಬಂಶವನ್ನು ನಾವು ಎಷ್ಟುಮಟ್ಟಿಗೆ ಒಪ್ಪಿಕೊಳ್ಳುವೆವೋ ಅಷ್ಟುಮಟ್ಟಿಗೆ, ಅತಿ ಸ್ವಲ್ಪವಾಗಿ ಪ್ರಜಾಪ್ರಾಬಲ್ಯವುಳ್ಳ ದೇಶಗಳಲ್ಲಿ ಸಹ, ರಾಜ್ಯಾಧಿಕಾರವನ್ನು ಪ್ರಜೆಗಳೇ ತಮಗೆ ತಿಳಿಯದಂತೆ ನಡಸುತ್ತಿರುವರೆಂಬುದನ್ನು ನಾವು ಒಪ್ಪಿಕೊಳ್ಳಬೇಕಾಗುವುದು.—ಇದು ಸಿಡ್ಜ್‌ವಿಕ್ ಎಂಬಾತನ ಹೇಳಿಕೆ.[9]

ಕಡೆಯಲ್ಲಿ ಯಾವ ಸಂಸ್ಥೆಯ ಅಭಿಮತಕ್ಕೆ ಒಂದು ರಾಜ್ಯದ ಪ್ರಜೆಗಳು ವಿಧೇಯರಾಗಿ ನಡೆದುಕೊಳ್ಳುವರೋ ಆ ಸಂಸ್ಥೆಯು ಅಲ್ಲಿಯ ಅತ್ಯಂತ ಸ್ವಾಮಿತ್ವವುಳ್ಳ, ಅಥವಾ ಮೇಲ್ಮಟ್ಟದ, ರಾಜ್ಯಸಂಸ್ಥೆಯೆನಿಸುವುದು. ಈ ಅರ್ಥದಲ್ಲಿ, ಬ್ರಿಟಿಷ್ ದ್ವೀಪಗಳಲ್ಲಿ, ಪಾರ್ಲಿಮೆಂಟ್ ಸಭೆಗೆ ಸದಸ್ಯರನ್ನು ಚುನಾಯಿಸುವ ಪ್ರಜೆಗಳೂ ಅಲ್ಲಿಯ ರಾಜ ಶ್ರೀಮಂತರುಗಳೂ ಸೇರಿದರೆ ಆಗುವ ಸಂಘವೇ ಅತಿ ಮುಖ್ಯವಾದ ರಾಜ್ಯಶಕ್ತಿಯುಳ್ಳದೆಂದು ಹೇಳ

[9] We must admit that there is a certain sense in which the mass of people in any country may be said to be the ultimate depository of supreme political power. . . . So far as we recognize the fear of disorder as an actual force restraining government, we must correspondingly recognize an unconscious exercise of political power by the people at large, even in the least democratic communities.
—H. SIDGWICK

ಬಹುದು; ಅಥವಾ ರಾಜ ಶ್ರೀಮಂತರುಗಳನ್ನು ಬಿಟ್ಟು ಪ್ರಜೆಯೇ ರಾಜ್ಯಶಕ್ತಿಯುಳ್ಳ ಸಂಸ್ಥೆಯೆಂದು ಹೇಳಿದರೂ ಹೇಳಬಹುದು. ಏಕೆಂದರೆ, ಬ್ರಿಟಿಷ್ ಸರ್ಕಾರವು ತೀರ್ಮಾನಿಸಬೇಕಾಗುವ ಎಲ್ಲ ವಿಷಯಗಳಲ್ಲಿಯೂ ಪ್ರತಿನಿಧಿಗಳನ್ನಾರಿಸುವವರ ಇಷ್ಟವೇ ಕಡೆಗೆ ಪ್ರಬಲಿಸುವುದು ಖಂಡಿತ. ಪ್ರತಿನಿಧಿಕರ್ತ್ರುಗಳ ಇಷ್ಟವೇ ಕೊನೆಗೆ ಸ್ಥಿರವಾಗುವ ರೀತಿಯಲ್ಲಿ (ಬ್ರಿಟನ್ನಿನ) ರಾಜ್ಯವ್ಯವಸ್ಥೆಯು ರಚಿತವಾಗಿದೆ . . . ರಾಜಶಕ್ತಿಗೆ ಹೊರಗಿನಿಂದುಂಟಾಗುವ ತಡೆಯೊಂದುಂಟು. ಅದಾವುದೆಂದರೆ—ಪ್ರಜೆಗಳು, ಅಥವಾ ಅವರಲ್ಲಿ ಬಹುಮಂದಿ, ತನ್ನ ಆಜ್ಞೆಗಳನ್ನು ಉಲ್ಲಂಘಿಸಿಯಾರು, ಅಥವಾ ಎದುರಿಸಿಯಾರು—ಎಂಬ ಸಂದೇಹ ಅಥವಾ ಭಯ. ಈ ತಡೆಯು ಅತ್ಯಂತ ನಿರಂಕುಶವಾದ ಪ್ರಭುತ್ವದಲ್ಲಿ ಕೂಡ ಇದ್ದೇ ಇರುವುದು . . . ನಿರಂಕುಶರಾಜನ ಅಧಿಕಾರವೂ ಸಹ ತನ್ನ ಪ್ರಜೆಗಳು, ಅಥವಾ ಅವರಲ್ಲಿ ಹಲವರಾದರೂ, ತನ್ನ ಆಜ್ಞೆಗಳನ್ನು ಸ್ವೀಕರಿಸಲು ಸಿದ್ಧರಾಗಿರುವರೆಂಬ ಭರವಸೆಯ ಮೇಲೆ ನಿಂತಿರುತ್ತದೆ; ಆದರೆ ಜನ ಹೀಗೆ ವಿಧೇಯರಾಗಿರಲು ಸಿದ್ಧರಾಗಿರುವುದಕ್ಕೆ ಮಿತಿಯುಂಟು . . . ರಾಜಶಕ್ತಿಗೆ ಒಳಗಿನಿಂದಲೂ ಒಂದು ತಡೆಯುಂಟು. ಅದು ಸ್ವಭಾವಜನ್ಯವಾದುದು. ಎಂಥ ನಿರಂಕುಶನಾದ ರಾಜನಾದರೂ ಅವನು ತನ್ನ ಗುಣಕ್ಕನುಸಾರವಾಗಿ ತನ್ನ ಸ್ವಾಮಿತ್ವವನ್ನು ಚಲಾಯಿಸುವನು; ಅವನ ಆ ಗುಣವು ಅವನ ಸುತ್ತಮುತ್ತಲಿನ ಸಂದರ್ಭಗಳು, ಅವನ ಕಾಲದ ನೀತಿಭಾವನೆಗಳು, ಅವನ ಸಮಾಜದ ಸ್ಥಿತಿ—ಇವುಗಳಿಗನುಸಾರವಾಗಿರುತ್ತದೆ. (ಹೀಗೆ ಎರಡು ರೀತಿಗಳಲ್ಲಿಯೂ ರಾಜ್ಯಶಕ್ತಿಯು ಸಮಾಜದ, ಅಥವಾ ಪ್ರಜೆಯ, ಇಷ್ಟಾನಿಷ್ಟಗಳಿಗೆ ಒಳಪಟ್ಟುದಾಗಿರುತ್ತದೆ.)—ಇದು ಎ. ವಿ. ಡೈಸಿ ಎಂಬವರ ಅಭಿಪ್ರಾಯ.[10]

---

[10] That body is politically sovereign or supreme in a State the will of which is ultimately obeyed by the citizens of the State. In this sense the electors of Great Britain may be said to be, together with the Crown and the Lords, or perhaps, in strict accuracy, independently of the King and the Peers, the body in which sovereign power is vested. For the will of the electorate is sure ultimately to prevail on all subjects to be determined by the British Government. The arrangements of the constitution are such that the will of the electors shall always in the end assert itself as the predominant influence. . . . The external limit to the real power of a sovereign consists in the possibility or certainty that his subjects, or a large number of them, will disobey or resist his laws. This limitation

ರಾಜ್ಯಶಕ್ತಿಯು ನಿಯಮಿತನಾದ ಯಾವನೋ ಒಬ್ಬನಲ್ಲಿ ಅಥವಾ ಸ್ವಲ್ಪ ಮಂದಿಯಲ್ಲಿ ಇರುವುದೆಂದು ಹೇಳಲಾಗುವುದಿಲ್ಲ; ಸಾಮುದಾಯಿಕ ಪ್ರಯೋಜನದೃಷ್ಟಿಯಿಂದ ಏಕೀಭವಿಸಿದವರೂ ಅನ್ಯೋನ್ಯಾಭಿಮಾನವುಳ್ಳವರೂ ಆದ ಪ್ರಜೆಗಳ ಮನಸ್ಸಿನಲ್ಲಿ ಹುಟ್ಟಿ, ಕೈಗೆ ಸಿಕ್ಕದುದಾಗಿರುವ, ಯಾವ ಆಶೆಭೀತಿಗಳ ಸಮುಚ್ಚಯವನ್ನು ನಾವು ಜನಮನೋಗತವೆಂದು ಕರೆಯುತ್ತೇವೆಯೋ ಅದರಲ್ಲಿಯೇ ರಾಜ್ಯಶಕ್ತಿಯು ಇರುವುದು.—ಇದು ಟಿ. ಎಚ್. ಗ್ರೀನ್ ಎಂಬವರ ಮತ.[11]

ಈ ಮೇಲಿನ ವಾಕ್ಯಗಳನ್ನೆಲ್ಲ ಪರಾಮರ್ಶಿಸಿ ನೋಡಿದರೆ ಪಾಶ್ಚಾತ್ಯರ ಮತಕ್ಕೂ ನಮ್ಮವರ ಮತಕ್ಕೂ ವ್ಯತ್ಯಾಸವೇನೂ ಹೆಚ್ಚಾಗಿರುವಂತೆ ತೋರುವುದಿಲ್ಲ. ನಮ್ಮಲ್ಲಿ ರಾಜನು ಧರ್ಮಕ್ಕೆ ಒಳಪಟ್ಟವನು; ಧರ್ಮವು ಸಮಾಜನಿಷ್ಠವಾದದ್ದು,—ಎಂದರೆ ಪ್ರಜಾಸಮೂಹದಲ್ಲಿರತಕ್ಕದ್ದು. ಪ್ರಜೆಯು ಧರ್ಮವನ್ನು ಆಗ ಮಾಡಿಸುವುದಕ್ಕಾಗಿಯೇ ರಾಜನು ನಿಯಮಿತನಾದವನಾದ ಕಾರಣ, ಅವನು ಆ ಪ್ರಜೆಯ ಮೇಲೆ ಆ ಧರ್ಮಕ್ಕೆ ಅನುಸಾರವಾದ ಮತ್ತು ಅದಕ್ಕೆ ವಿರೋಧವಾಗದ ಅಧಿಕಾರವನ್ನು ಪಡೆದಿರುತ್ತಾನೆ. ಪಾಶ್ಚಾತ್ಯರಲ್ಲಿ ರಾಜನು ಪ್ರಜಾಭಿಮತಕ್ಕೆ ಒಳಪಟ್ಟವನು. ಪ್ರಜಾಭಿಮತವಾದರೋ ಅವರ ಧರ್ಮವನ್ನು—ಎಂದರೆ

---

exists even under the most despotic monarchies. . . . The authority even of a despot depends upon the readiness of his subjects or of some portion of his subjects to obey his behests; and this readiness to obey must always be in reality limited. . . . The internal limit to the exercise of sovereignty arises from the nature of the sovereign power itself. Even a despot exercises his powers in accordance with his character, which is itself moulded by the circumstances under which he lives, including under that head the moral feelings of the time and the society to which he belongs. —A. V. DICEY

[11] Sovereignty can no longer be said to reside in a determinate person or persons, but in that impalpable congeries of the hopes and fears of a people bound together by common interest and sympathy, which we call the common will. —T. H. GREEN

ಯಾವ ವಿಧಿನಿಷೇಧಗಳನ್ನು ಅವರು ಸರಿಯೆಂದು ಅಂಗೀಕರಿಸಿರುವರೋ ಅದನ್ನು—ಅನುಸರಿಸಿರುವುದು. ಹೀಗೆ ಲೋಕಾಂಗೀಕೃತವಾದ ಧರ್ಮವು ಯಾವ ದೇಶದಲ್ಲಿಯೇ ಆದರೂ ಬಹುಮಟ್ಟಿಗೆ ನಮ್ಮ ಶ್ರುತಿಸ್ಮೃತಿಗಳಂಥ ವೃದ್ಧವಚನ ಪೂರ್ವಸಂಪ್ರದಾಯಗಳನ್ನಾಶ್ರಯಿಸಿದ್ದಾಗಿಯೇ ಇರಬೇಕೆಂಬುದನ್ನು ಮೇಲೆ ತೋರಿಸಿದೆ. ಸಾರಾಂಶವೇನೆಂದರೆ, ಪಾಶ್ಚಾತ್ಯರೀತಿಯಲ್ಲಿ ನೋಡಿದರೂ, ಪೌರಸ್ತ್ಯರೀತಿಯಲ್ಲಿ ನೋಡಿದರೂ, ರಾಜ್ಯಶಕ್ತಿಯು ಸಮಾಜದಲ್ಲಿ ಹುಟ್ಟಿದ್ದಾಗಿ, ರಾಜನ ಅಥವಾ ರಾಜ್ಯಾಧಿಕಾರಿಗಳ ಮುಖೇನ ಕೆಲಸಮಾಡುತ್ತದೆ. ಗ್ರಾಮಕ್ಕೆಲ್ಲ ಸೇರಿದ ಕೆರೆಯ ನೀರು ಮಣೆಯಗಾರನ ಅಥವಾ ನೀರುಗಂಟಿಯ ದ್ವಾರಾ ಹರಿದು ಬಂದು, ಗ್ರಾಮಸ್ಥರೆಲ್ಲರ ಗದ್ದೆ ತೋಟಗಳನ್ನು ಸೇರುವಂತೆ, ಪ್ರಜೆಯಲ್ಲಿ ಸಮೂಹತ್ವೇನ ಉತ್ಪನ್ನವಾದ ಶಕ್ತಿಯು ರಾಜನ ಅಥವಾ ಮಂತ್ರಿಮಂಡಲದ ದ್ವಾರಾ ಶಿಕ್ಷಣೆರಕ್ಷಣೆಗಳ ರೂಪವನ್ನು ತಾಳಿಬಂದು ಪ್ರಜೆಯನ್ನೇ ಸೇರುವುದು.

ರಾಜ್ಯವೆಂಬುದು ಒಂದು ಮಹಾವೃಕ್ಷ. ಪ್ರಜೆಯೆಂಬುದು ಅದರ ಸಾವಿರ ಬೇರುಗಳು. ಈ ಬೇರುಗಳಲ್ಲಿಯ ಜೀವರಸವೇ ಸ್ವಾಮ್ಯಶಕ್ತಿ. ಆ ಸ್ವಾಮ್ಯರಸವು ಆ ಮರದ ಮುಂಡದಲ್ಲಿ ಹರಿಯುತ್ತಿರುವಾಗ ಅದರ ಬೆಳವಣಿಗೆ. ಆ ಮುಂಡವೇ ರಾಜ. ಅದರ ನಾಲ್ಕಾರು ಕೊಂಬೆ ರೆಂಬೆಗಳೇ ನಾನಾ ಮಂತ್ರಿ ಅಧಿಕಾರಿಗಳು. ಅವುಗಳ ಮೇಲಣ ಹೂವು ಹಣ್ಣುಗಳೇ ಜನಜೀವನದ ಭಾಗ್ಯ.

---

# ೮. ರಾಜ್ಯವ್ಯವಸ್ಥೆಯು ವಿಧಿವಿಧಾನಗಳು

ರಾಜ್ಯಶಕ್ತಿಯನ್ನು ಉಪಯೋಗಮಾಡತಕ್ಕವರು ಯಾವ ರೀತಿಯಲ್ಲಿ, ಯಾವ ನಿಯಮಗಳನ್ನನುಸರಿಸಿ, ನಡೆದರೆ ಅವರ ಅಧಿಕಾರವು ಧರ್ಮಕ್ಕೆ ತಕ್ಕಂತೆ ಇರುವುದು, ಅಥವಾ ಪ್ರಜಾ ಸಮ್ಮತವಾಗಿರುವುದು—ಎಂಬುದನ್ನು ವಿಧಿಸತಕ್ಕದ್ದೇ ರಾಜ್ಯ ವ್ಯವಸ್ಥೆಯ ಉದ್ದೇಶ. ಎಂಥ ರಾಜನಾದರೂ ತನ್ನ ಅಧಿಕಾರ ವನ್ನು ಚಲಾಯಿಸುವುದರಲ್ಲಿ ಆತನು ಕೆಲಮಂದಿ ಅಧಿಕಾರಿಗಳ ಸಹಾಯವನ್ನು ಪಡೆಯಲೇಬೇಕಷ್ಟೆ? ಈ ಕಾರ್ಯಭಾರಿಗಳ ಕಾರ್ಯವಿಭಾಗವು ಹೇಗಿರಬೇಕು? ಅವರು ಕರ್ತವ್ಯಗಳನ್ನು ಬಿಡದಂತೆಯೂ ಮೀರದಂತೆಯೂ ನೋಡಿಕೊಳ್ಳಲು ಯಾವ ಯಾವ ಏರ್ಪಾಟುಗಳಿರಬೇಕು?—ಇವುಗಳನ್ನು ನಿಷ್ಕರ್ಷಿಸು ವುದು ರಾಜ್ಯವ್ಯವಸ್ಥೆಯ ಕೆಲಸದ ಮುಖ್ಯಭಾಗ.

ರಾಜ್ಯವ್ಯವಸ್ಥೆಯು ಪಾಶ್ಚಾತ್ಯದೇಶಗಳಲ್ಲಿ ಕೆಲವೆಡೆ ಲಿಖಿತ ವಾದದ್ದಾಗಿಯೂ ಕೆಲವೆಡೆ ಲಿಖಿತವಾಗದೆಯೂ ಇರುತ್ತದೆ. ರಾಜ್ಯಶಕ್ತಿಯು ಯಾವ ಸಂಸ್ಥೆಗಳ ಮೂಲಕ ಪ್ರಯುಕ್ತವಾಗ ಬೇಕು, ಎಂದರೆ ಚಲಾವಣೆಗೆ ಬರಬೇಕು; ತತ್ಪ್ರೇರಕವಾದ ಪ್ರಜಾಭಿಮತವು ಯಾವ ಸಂಸ್ಥೆಗಳ ಮೂಲಕ ಅಭಿವ್ಯಕ್ತ ವಾಗಬೇಕು, ಎಂದರೆ ಹೊರಪಡಬೇಕು; ಈ ಎರಡು ಬಗೆಯ ಸಂಸ್ಥೆಗಳೂ ಒಂದನ್ನೊಂದು ಯಾವ ರೀತಿ ನಿಯಂತ್ರಿಸಬೇಕು— ಎಂಬೀ ವಿವರಗಳು ಸಂಪೂರ್ಣವಾಗಿ ಶಾಸನರೂಪದಲ್ಲಿ ಬರೆಯಲ್ಪಟ್ಟಿದ್ದರೆ ಅದು ಲಿಖಿತವ್ಯವಸ್ಥೆಯೆನ್ನಿಸುವುದು. ಅಮೆರಿ ಕದ ಸಂಯುಕ್ತರಾಷ್ಟ್ರದಂತೆ ಹೊಸದಾಗಿ ಹುಟ್ಟಿರುವ ರಾಜ್ಯ ಗಳು ಹೀಗೆ ಲಿಖಿತವ್ಯವಸ್ಥೆಗಳನ್ನು ಮಾಡಿಕೊಳ್ಳುವುದು ಸಾಧ್ಯ. ಆದರೆ ಇಂಗ್ಲೆಂಡಿನಂಥ ಪುರಾತನರಾಜ್ಯದ ವ್ಯವಸ್ಥೆಯು, ಕೊಂಚಮಟ್ಟಿಗೆ ಹಿಂದಿನಕಾಲದ ಶಾಸನಪತ್ರಗಳ ಮೂಲಕ ಲಿಖಿತರೂಪದಲ್ಲಿ ಬಂದಿದ್ದರೂ, ಅದರ ಬಹುಭಾಗವು ಬರವಣಿಗೆಗೆ

ಬಾರದೆ ಸಂಪ್ರದಾಯರೂಪದಲ್ಲಿ ಬಂದಿರುತ್ತದೆ. ಉದಾಹರಣೆಗಾಗಿ, ಬ್ರಿಟಿಷ್ ಸಾಮ್ರಾಜ್ಯದ ಆಧಿಪತ್ಯವನ್ನು ನಡಸುವ "ಕ್ಯಾಬಿನೆಟ್" ಎಂಬ ಮಂತ್ರಿಸಂಪುಟವು ಯಾವ ಶಾಸನದ ಅಥವಾ ಕಾನೂನಿನ ಪ್ರಕಾರವಾಗಿಯಾದರೂ ನಿಯಮಿತವಾಗಿರುವುದಲ್ಲ; ಅದು ಒಂದು ಉಪಸಭೆಯ ರೂಪದಲ್ಲಿ ಹುಟ್ಟಿ, ಕ್ರಮೇಣ ಬೆಳೆದು, ಅಧಿಕಾರವನ್ನು ಸಂಪಾದಿಸಿಕೊಂಡದ್ದು. ಎಲ್ಲ ಹಳೆಯ ರಾಜ್ಯಗಳಲ್ಲಿಯೂ ಹೀಗೆ ಬೆಳೆದ ಸಂಪ್ರದಾಯ ಪದ್ಧತಿಗಳುಂಟು. ಇಂಥ ಸಂಪ್ರದಾಯಕ್ಕೆ ಅಥವಾ "ಮಾಮೂಲಿ"ಗೆ ಇಂಗ್ಲಿಷಿನಲ್ಲಿ "ಕನ್ವೆನ್‌ಷನ್" ಎಂದು ಹೆಸರು. ಇಂಥಾದ್ದನ್ನು ನಮ್ಮ ಪ್ರಾಚೀನ ಶಾಸ್ತ್ರಪ್ರವರ್ತಕರು "ರೂಢಿ" ಎಂದೂ ಕರೆದಿದ್ದಾರೆ. ಬ್ರಿಟಿಷರ ಕಾಲದ ಮೈಸೂರು ರಾಜ್ಯದಲ್ಲಿ, ಇಂಗ್ಲೆಂಡಿನಲ್ಲಿರುವಂತೆ, ರಾಜ್ಯವ್ಯವಸ್ಥೆಯು ಸ್ವಲ್ಪಮಟ್ಟಿಗೆ ಲಿಖಿತರೂಪದಲ್ಲಿದ್ದರೂ ಬಹುಮಟ್ಟಿಗೆ ಅಲಿಖಿತವಾದ ರೂಢಿಯ ರೂಪದಲ್ಲಿತ್ತು. ಇಂಡಿಯವು ಸ್ವತಂತ್ರವಾದ ಮೇಲೆ ಅಂಗೀಕರಿಸಿಕೊಂಡಿರುವ ರಾಜ್ಯಪದ್ಧತಿಯಲ್ಲಿಯೂ ಲಿಖಿತ ರಾಜ್ಯನಿಬಂಧನೆಗೆ ಪರಿಪೂರಕವಾಗಿ ಲಿಖಿತವಲ್ಲದ ಸಂಕೇತ ಸಂಪ್ರದಾಯಗಳು ಕೆಲವು ಉಂಟೇ ಉಂಟು. ಇಂಥ ರೂಢಿ, ಅಥವಾ "ಮಾಮೂಲು," ಎಲ್ಲ ದೇಶಗಳಲ್ಲೂ, ಎಲ್ಲ ಸಮಾಜಗಳಲ್ಲೂ ಅಷ್ಟೋ ಇಷ್ಟೋ ಇದ್ದೇ ಇರುತ್ತದೆ. ಎಲ್ಲವನ್ನೂ ಶಾಸನ ಗ್ರಂಥದಲ್ಲಿ ಬರೆದಿರಿಸುವುದು ಸಾಧ್ಯವಾಗದು.

ಪುರಾತನ ಹಿಂದೂರಾಜ್ಯಗಳ ವ್ಯವಸ್ಥೆ ನಿಬಂಧನೆಗಳು ಬಹುಮಟ್ಟಿಗೆ ಅಲಿಖಿತವಾದ ರೂಢಿಯ ರೂಪದಲ್ಲಿಯೇ ಇದ್ದಿರಬೇಕೆಂದು ಅನುಮಾನಿಸಲು ಬೇಕಾದಷ್ಟು ಕಾರಣಗಳಿವೆ. ಮೊದಲನೆಯದಾಗಿ, ಸ್ವಾಭಾವಿಕವಾಗಿ ಬೆಳೆಯುತ್ತಿರುವ ರಾಜ್ಯಗಳು ತಮ್ಮ ವ್ಯವಸ್ಥೆಗಳನ್ನೆಲ್ಲ ಬರೆದಿಡಬೇಕಾದ ಕಾರಣವಿಲ್ಲ; ಎರಡನೆಯದಾಗಿ, ಒಂದು ವೇಳೆ ನಿಬಂಧನೆಗಳು ಬರಹಕ್ಕೆ ಬರುವುವಾಗಿದ್ದರೂ, ಅವು ಹಾಗೆ ಬರುವುದಕ್ಕೆ ಮುಂಚೆ ಬಹುಶಃ

ರೂಢಿಯಲ್ಲಿ ಸ್ಥಾಪಿತವಾಗಿದ್ದವುಗಳೇ ಆಗಿರುತ್ತವೆ. ಹೀಗಿರುವುದರಿಂದ, ನಮ್ಮ ಪೂರ್ವರಾಜ್ಯಗಳ ರಚನೆ ಹೇಗಿತ್ತೆಂಬುದರ ಬಹುಭಾಗವನ್ನು ನಾವು ನಮ್ಮ ಸಾಮಾಜಿಕ ಸಂಪ್ರದಾಯಗಳಿಂದ ಊಹಿಸಿ ತಿಳಿಯಬೇಕಾಗಿದೆ. ನಮ್ಮ ದೇಶದಲ್ಲಿ ಬಹುಕಾಲದಿಂದ ಬಂದಿರುವ ಜಾತಿಪದ್ಧತಿಗಳನ್ನೂ, ಕುಲಾಚಾರಗಳನ್ನೂ, ಸಮಾಜದ ಕಟ್ಟುಪಾಡುಗಳನ್ನೂ ನೋಡಿದರೆ, ಹಲವು ಬಗೆಯ ಪ್ರಜಾಸಂಸ್ಥೆಗಳು ಪೂರ್ವದಲ್ಲಿಯೂ ಇದ್ದಿರಬೇಕೆಂದೂ, ಅವುಗಳಿಂದ ರಾಜಾಧಿಕಾರದ ಧೋರಣೆಯು ತಕ್ಕಮಟ್ಟಿಗೆ ತಡೆಯಲ್ಪಡುತ್ತಿತ್ತೆಂದೂ, ರಾಜನ ಮೇಲೆ ಧರ್ಮಶಾಸ್ತ್ರ ಜನವಾಕ್ಯಗಳೆಂಬ "ಅಂಕುಶ"ಗಳು ಯಾವಾಗಲೂ ಇದ್ದುವೆಂದೂ ಊಹಿಸಬೇಕಾಗುತ್ತದೆ.

ರಾಜ್ಯವ್ಯವಸ್ಥೆಯ ವಿಧಾನಗಳು ಅಥವಾ ಕ್ರಮಗಳು ಅನೇಕವಾಗಿರುತ್ತವೆ. ಇವು ದೇಶದ ಚರಿತ್ರೆಗೆ—ಎಂದರೆ ಅಲ್ಲಿಯ ಜನರ ಶೀಲಸ್ವಭಾವ ಸಾಮರ್ಥ್ಯಗಳು, ಅವರ ಪೂರ್ವರಾಜರುಗಳ ಕಾರ್ಯಾಕಾರ್ಯಗಳು, ಅವರಿಗೆ ಪರದೇಶಗಳಿಂದೊದಗಿದ ಸ್ನೇಹದ್ವೇಷಗಳು, ಇವುಗಳಿಗೆ—ಅನುಸಾರವಾಗಿರಬೇಕಷ್ಟೆ? ಪ್ರಪಂಚದಲ್ಲಿ ಒಂದೊಂದು ದೇಶದ ಚರಿತ್ರೆಯು ಒಂದೊಂದು ರೀತಿ ಇರುವುದರಿಂದ ಅವುಗಳ ರಾಜ್ಯವ್ಯವಸ್ಥೆಗಳಲ್ಲಿಯೂ ಸಂದರ್ಭಾನುಸಾರ ಹೆಚ್ಚುಕಡಮೆಗಳಿರಲೇ ಬೇಕು. ಇದುವರೆಗೂ ನಮಗೆ ಕಂಡುಬಂದಿರುವ ಮುಖ್ಯಮುಖ್ಯ ರಾಜ್ಯಗಳ ವ್ಯವಸ್ಥಾರೀತಿಗಳನ್ನು ವಿಮರ್ಶೆಮಾಡಿ ನೋಡಿದರೆ ಸ್ಥೂಲವಾಗಿ ಮೂರು ನಾಲ್ಕು ಜಾತಿಗಳು ಹೊರಪಡುತ್ತವೆ:—

(೧) ನಿರಂಕುಶ ರಾಜವ್ಯವಸ್ಥೆ—ಇದನ್ನು ಇಂಗ್ಲಿಷಿನಲ್ಲಿ "ಆಟೋಕ್ರಸಿ," "ಡೆಸ್ಪೊಟಿಸಂ," "ಅಬ್ಸೊಲ್ಯೂಟಿಸಂ" ಎಂದು ಕರೆಯುತ್ತಾರೆ. ಈ ವ್ಯವಸ್ಥೆಯಲ್ಲಿ ಎಲ್ಲ ರಾಜ್ಯಕಾರ್ಯಗಳೂ ರಾಜನ ಇಷ್ಟದಂತೆಯೇ ನಡೆಯುವುವು. ರಾಜನ ಸ್ವೇಚ್ಛಾವರ್ತನೆಗೆ ಸಾಮಾನ್ಯವಾಗಿ ಯಾವ ಅಡ್ಡಿಯೂ ಇರುವುದಿಲ್ಲ.

ಆದರೆ ಆತನ ಆಜ್ಞೆಯು ಎರಡು ವಿಧವಾದ ತಡೆ, ಅಥವಾ ಮಿತಿಗಳಿಗೆ ಒಳಪಟ್ಟಿರುವುದು. ಮೊದಲನೆಯದಾಗಿ, ಮೇಲೊಂದು ಕಡೆ ಸೂಚಿಸಿರುವಂತೆ, ಪ್ರಜೆಗಳು ಸಹಿಸಲಾರದೆ ದಂಗೆಯೆದ್ದಾರೇನೋ ಎಂಬ ಭಯವು ಆತನಿಗೆ ಇದ್ದೇ ಇರುತ್ತದೆ. ಎರಡನೆಯದಾಗಿ, ತನ್ನ ಇಷ್ಟವನ್ನು ನೆರವೇರಿಸಲು ರಾಜನು ನಿಯಮಿಸಿರುವ ಪ್ರತಿನಿಧಿಗಳೂ ಅಧಿಕಾರಿಗಳೂ ಸ್ವಲ್ಪಮಟ್ಟಿಗಾದರೂ ಸ್ವತಂತ್ರಿಸಿ ಕೆಲಸ ಮಾಡಬೇಕಾಗುವುದರಿಂದ, ಅವರು ಮಾಡಬಹುದಾದ ಹೆಚ್ಚು ಕಡಮೆಗಳಿಂದ ರಾಜಾಜ್ಞೆಯ ಪರಿಣಾಮವು ರಾಜನ ಉದ್ದೇಶಕ್ಕಿಂತ ಅಷ್ಟಿಷ್ಟು ಬೇರೆಯಾಗಬಹುದು.

ನಿರಂಕುಶರಾಜನಾದವನು ಧರ್ಮಿಷ್ಠನೂ ಪ್ರಜಾವತ್ಸಲನೂ ಸಮರ್ಥನೂ ಆಗಿದ್ದರೆ ಈ ಎರಡು ತಡೆಗಳೂ ಕಾಣಿಸಿಕೊಳ್ಳಲಾರವು. ಅಂಥವನ ನಿರಂಕುಶತೆಯಿಂದ ದೇಶಕ್ಕೆ ತತ್ಕಾಲದಲ್ಲಿ ಉಪಕಾರವೇ ಆಗುವುದು ; ಏಕೆಂದರೆ ಅವನು ಧಾರಾಳವಾಗಿ, ಬಹುಸುಲಭವಾಗಿ, ಕಾರ್ಯಗಳನ್ನು ಮಾಡಲಾಗುವುದು. ಕ್ರಿಸ್ತಶಕ ೧೬೭೨-೧೭೨೫ ರಲ್ಲಿದ್ದ ರಷ್ಯಾದೇಶದ ಪೀಟರ್ ಮಹಾಚಕ್ರವರ್ತಿಯೂ, ೧೭೧೨-೧೭೮೬ ರಲ್ಲಿದ್ದ ಪ್ರಷ್ಯಾದೇಶದ ಫ್ರೆಡರಿಕ್ ಮಹಾರಾಜನೂ, ೧೫೫೬-೧೬೦೫ ರಲ್ಲಿದ್ದ ಇಂಡಿಯಾ ದೇಶದ ಅಕ್ಬರ್ ಚಕ್ರವರ್ತಿಯೂ ನಿರಂಕುಶಪ್ರಭುಗಳಾಗಿದ್ದ ಕಾರಣ, ಅವರು ಇತರರ ಅಡಚಣೆಗಳಿಲ್ಲದವರಾಗಿ, ತಮ್ಮ ಬುದ್ಧಿಸಾಹಸಗಳನ್ನು ಸ್ವತಂತ್ರವಾಗಿ ಉಪಯೋಗಿಸಿ, ತಮ್ಮ ತಮ್ಮ ರಾಜ್ಯಗಳನ್ನು ಹೀನಸ್ಥಿತಿಯಿಂದ ಉನ್ನತಸ್ಥಿತಿಗೆ ತರಲು ಸಾಧ್ಯವಾಯಿತು. ಆದರೆ ನಿರಂಕುಶರಾಜರಲ್ಲಿ ಅಂಥ ದೇಶಾಭಿಮಾನವೂ ಸ್ಥೈರ್ಯಸಾಮರ್ಥ್ಯಗಳೂ ಸೇರಿರುವುದು ಸಾಮಾನ್ಯವಲ್ಲ. ಇದಕ್ಕೆ ಪ್ರತಿಯಾಗಿ, ನಿರಂಕುಶರಾಜನು ಭೋಗಾಸಕ್ತನೂ ದುರ್ವ್ಯಸನಿಯೂ ದೇಶವಿಷಯದಲ್ಲಿ ಉಪೇಕ್ಷೆಯುಳ್ಳವನೂ ಆಗಲು ಆನುಕೂಲ್ಯ ಪ್ರೋತ್ಸಾಹಗಳು ಹೆಚ್ಚು. ಅವನು ಹಾಗಾದರೆ ಅವನ ಆಳಿಕೆಯು ಪ್ರಜಾರಂಜಕವಾಗ

ಲಾರದು ; ಅಂಥವನ ಆಜ್ಞಾಧಾರಕರಾದ ಅಧಿಕಾರಿಗಳಾದರೂ ಅವನಿಗೆ ವಶವರ್ತಿಗಳಾಗಿರುವುದೇ ಸ್ವಾಭಾವಿಕವಾದದ್ದರಿಂದ, ರಾಜನ ಹೆಸರಿನಲ್ಲಿ ಅವರು ಮಾಡುವ ಕೆಲಸಗಳೂ ಪ್ರಜೆಗಳ ಪ್ರೀತಿಯನ್ನು ಸಂಪಾದಿಸಲಾರದೆ ಹೋಗುವುವು. ಆಗ ಮೇಲೆ ಹೇಳಿದ ಎರಡನೆಯ ತಡೆಯು—ಎಂದರೆ ರಾಜ್ಯಾಧಿಕಾರಿಗಳ ಸ್ವಂತ ವರ್ತನೆಯು, ಮೊದಲನೆಯ ತಡೆಯನ್ನು—ಎಂದರೆ ಜನರು ಕ್ರಾಂತಿಮಾಡುವ ಸಂಭವವನ್ನು—ಮತ್ತಷ್ಟು ಬಲಪಡಿಸುವುದೇ ಆಗಿರುತ್ತದೆ. ಒಟ್ಟಿನ ಮೇಲೆ, ನಿರಂಕುಶವ್ಯವಸ್ಥೆಯ ವಿಷಯದಲ್ಲಿ ಪ್ರಪಂಚದ ಅನುಭವವು ವಿಷಾದಕರವಾಗಿದೆ. ರಾಜನು ನಿರಂಕುಶ ಸ್ಥಿತಿಯಲ್ಲಿದ್ದರೆ ಅವನ ಒಳ್ಳೆಯ ಗುಣಗಳು ಪ್ರಕಾಶಕ್ಕೆ ಬರಲು ಅವಕಾಶ ಸಾಹಾಯ್ಯಗಳು ಕಡಮೆಯೆಂದೂ ; ಅವನ ದುರ್ಗುಣಗಳು ಬೆಳೆಯಲು ಪ್ರೋತ್ಸಾಹ ಬೆಂಬಲಗಳು ಹೆಚ್ಚೆಂದೂ ; ಇದು ಹೀಗಿರುವಲ್ಲಿ, ವಿರಳವಾಗಿ ದೊರೆಯುವ ಒಳ್ಳೆಯ ನಿರಂಕುಶ ರಾಜರಿಂದಾಗುವ ಉಪಕಾರಗಳಿಗಿಂತ ಸಾಧಾರಣವಾಗಿ ದೊರೆಯುವ ಕೆಟ್ಟ ನಿರಂಕುಶರಾಜರು ಮಾಡುವ ಅಪಕಾರಗಳೇ ಪರಿಮಾಣದಲ್ಲಿ ದೊಡ್ಡವೆಂದೂ ಎಲ್ಲ ದೇಶಗಳವರೂ ನಿರ್ಧರಿಸಿದ್ದಾರೆ. ಆದರಂತೆ ನಿರಂಕುಶಪ್ರಭುತ್ವವು ಈಗ ಲೋಕದಲ್ಲಿ ಬಹುಮಟ್ಟಿಗೆ ಇಲ್ಲವಾಗಿ ಹೋಗಿದೆಯೆಂದು, ಅಥವಾ ಬೇಗನೆ ಸಂಪೂರ್ಣವಾಗಿಯೇ ಇಲ್ಲದೆ ಹೋದೀತೆಂದು ಹೇಳಬಹುದು. ರಷ್ಯಾರಾಜ್ಯವು ರಾಜನ ಸ್ವೇಚ್ಛಾಪ್ರಭುತ್ವಕ್ಕೆ ತೌರುಮನೆಯೆಂದು ಗಾದೆಯಾಗಿತ್ತು; ಈಗ ಅಲ್ಲಿ ಆ ರಾಜಪ್ರಭುತ್ವದ ಗುರುತು ಸಂಪೂರ್ಣವಾಗಿ ತೊಡೆದುಹೋಗಿದೆ.

(೨) **ಭೃತ್ಯಾಧಿಕಾರವ್ಯವಸ್ಥೆ**—ರಾಜ್ಯಭೃತ್ಯರೇ, ಎಂದರೆ ಬಗೆಬಗೆಯ ಅಧಿಕಾರಗಳನ್ನು ವಹಿಸಿರುವ ವೇತನಗ್ರಾಹಿಗಳಾದ ರಾಜಕೀಯೋದ್ಯೋಗಿಗಳೇ, ರಾಜ್ಯಕಾರ್ಯವನ್ನೆಲ್ಲ ನಡಸಿಕೊಂಡು ಹೋಗುವ ಪದ್ಧತಿ. ಈ ಪದ್ಧತಿಯನ್ನು ಇಂಗ್ಲಿಷಿನಲ್ಲಿ "ಬ್ಯೂರೋಕ್ರಸಿ" (ಎಂದರೆ ಇಲಾಖೆಗಳ

ದೌಲತ್ತು) ಎಂದು ಕರೆಯುತ್ತಾರೆ. ಅದು "ಕಾರುಃ ಪ್ರಭುತ್ವ". ಅದನ್ನು ನಮ್ಮಲ್ಲಿ "ನೌಕರಶಾಹಿ" ಎ "ಆಳರಸುತನ" ಎಂದೂ ಕರೆಯುವುದುಂಟು. ಇದು ಕಛೇ ಕಾರಕರ್ರು, ಗುಮಾಸ್ತರ ಪಾರುಪತ್ಯ. ಈ ಪದ್ಧತಿಯಲ್ಲಿ ನಿ ವಾದ ಕಾರ್ಯನಿರ್ವಾಹ ಕ್ರಮವೊಂದೇನೋ ಇರುವುದು ವಿಚಕ್ಷಣೆ ಒಂದು ಮೇಲ್ಮಟ್ಟದಲ್ಲಿರುವುದು ದಿಟ. ಆದರೆ ಅ ರಾಜ-ಪ್ರಜೆಗಳಿಗೆ ಸ್ವಾಭಾವಿಕವಾಗಿ ಇರಬೇಕಾದ ಪ ಬಂಧುಭಾವವೂ ಮಮತಾವಾತ್ಸಲ್ಯಗಳೂ ಅಷ್ಟಾಗಿ ಕಾ ಲಾರವು. ರಾಜ್ಯವಿಷಯುಗಳು ಮಾನುಷಜೀವನದ ಸಂದರ್ಭಗಳಂತೆ ಪರಿಗಣಿತವಾಗುವುದು ಹೋಗಿ, ಶುಷ್ಕ ಪ್ರಸಂಗಗಳಾಗುವುವು ; ಆಗ ರಾಜ್ಯವೆಂಬುದು ಒಂದು ಪ ಯಂತೆ ಜೀವಿಸುವುದಕ್ಕೆ ಪ್ರತಿಯಾಗಿ ಒಂದು ನಿರ್ಜೀವಯ ದಂತೆ ಆಗುವುದು—ಹೀಗೆಂಬುದು ಈ ಕಾರುಬಾರೀ ಪ್ರಭ ಮೇಲಿರುವ ಆಕ್ಷೇಪಣೆ.

(೩) **ಸಾಂಕುಶರಾಜವ್ಯವಸ್ಥೆ**—ಇದನ್ನು ಇಂಗ್ಲಿ "ಲಿಮಿಟೆಡ್ ಮಾನಾರ್ಕಿ" ಎನ್ನುತ್ತಾರೆ. ಈ ವ್ಯವಸ್ಥೆಯಲ್ಲಿ ರಾಜ್ಯಕಾರ್ಯಗಳೂ ರಾಜನ ಆಜ್ಞಾನುಸಾರ, ಪ್ರಜಾಪ ಮಂತ್ರಿಗಳ ಕೈಯಿಂದ, ಪ್ರಜಾವಿಹಿತವಾದಂತೆ ನಡೆಯುಃವ ಎಂದರೆ ರಾಜಪ್ರಜೆಗಳಿಬ್ಬರೂ ರಾಜ್ಯಕಾರ್ಯದಲ್ಲಿ ಭಾಗಿಗಳ ವರು. ಇವರಲ್ಲಿ ಪ್ರಜಾಭಿಮತವನ್ನು ಗೊತ್ತುಮಾಡುವ ನಿಯತವಾದ ಒಂದು ಪ್ರಜಾಪ್ರತಿನಿಧಿಸಭೆಯಂಥ ಏರ್ಪಾ ಅದರ ಮೂಲಕ ಗೊತ್ತಾದ ಪ್ರಜಾಭಿಮತವು ರಾಜ್ಯಾಧಿ ಗಳನ್ನು ನಿರ್ಬಂಧಿಸುವಂತೆ ಕ್ಲುಪ್ತವಾದ ಕಟ್ಟುಪಾಡೂ ವುದರಿಂದ, ಅಂಥ ವ್ಯವಸ್ಥೆಯನ್ನು ಇಂಗ್ಲಿಷಿನಲ್ಲಿ "ಡೆಮಾಕ್ರೆ ಅಥವಾ "ಪ್ರಜಾಪ್ರಭುತ್ವ" ಎಂದೂ ಕರೆಯುವುದುಃ ಸಕಲಶಾಸನಗಳಿಗೂ ನಾಮಾಂಕಿತವನ್ನು ಕೊಟ್ಟು ಅವು ಜೀವಶಕ್ತಿಯನ್ನು ತುಂಬುವ ರಾಜನೂ, ಅದಕ್ಕೆ ಮುಂಃ

ಶಾಸನಗಳು ಅಂಗೀಕಾರಾರ್ಹಗಳೆಂದು ತೀರ್ಮಾನಿಸುವ ಪ್ರತಿನಿಧಿಸಭೆಯೂ ಎರಡೂ ಪರಸ್ಪರ ವಿರೋಧಿಗಳಲ್ಲ. ಅವೆರಡೂ ಒಟ್ಟುಗೂಡಿ ಅಂಗಾಂಗಿಭಾವದಿಂದ ಇರಬಹುದು. ಇಂಗ್ಲೆಂಡಿನಲ್ಲಿ ಈಗ ಹಾಗೆ ಇದೆ; ಜಪಾನಿನಲ್ಲಿಯೂ ಹಾಗೆಯೇ ಇತ್ತೆಂದು ಹೇಳಬಹುದು. ಹಿಂದಿನ ಮೈಸೂರಿನದೂ ಅಂಥ ಪ್ರಜಾಪ್ರತಿನಿಧಿ ಸಹಿತ ಸರಾಜಕವ್ಯವಸ್ಥೆಯನ್ನೇ ತಕ್ಕಮಟ್ಟಿಗೆ ಹೋಲುತ್ತಿತ್ತು.

(೪) **ಜನತಾರಾಷ್ಟ್ರ ಅಥವಾ ಪ್ರಜಾಪಾರಮ್ಯ**—ಇದನ್ನು ಇಂಗ್ಲಿಷಿನಲ್ಲಿ "ರಿಪಬ್ಲಿಕ್" ಎಂದು ಕರೆಯುತ್ತಾರೆ. ಇದು (ಡೆಮಾಕ್ರಸಿ) ಪ್ರಜಾಪ್ರಭುತ್ವದ ರೂಪಾಧಿಕ್ಯ. ಈ ವ್ಯವಸ್ಥೆಯಲ್ಲಿ ಎಲ್ಲ ರಾಜ್ಯಕಾರ್ಯಗಳೂ ಪ್ರಜೆಗಳ ಇಷ್ಟದಂತೆಯೇ—ಎಂದರೆ ಸಾಮಾನ್ಯವಾಗಿ ಪ್ರಜಾಪ್ರತಿನಿಧಿ ಸಭೆಗಳ ತೀರ್ಮಾನಗಳಂತೆಯೂ, ಕೆಲವು ಸಂದರ್ಭಗಳಲ್ಲಿ ಪ್ರಜೆಗಳೇ ಸ್ವಯಂ ಮಹಾಸಭೆಗಳನ್ನು ಮಾಡಿಕೊಡುವ ತೀರ್ಮಾನಗಳಂತೆಯೂ—ನಡೆಯುವುವು. ಮೇಲಿನ (೧), (೩) ನೆಯ ವ್ಯವಸ್ಥೆಗಳಲ್ಲಿ ರಾಜನೆನ್ನಿಸಿಕೊಂಡವನೊಬ್ಬನಿರುವಂತೆ ಇದರಲ್ಲಿ ಇರುವುದಿಲ್ಲ. ಇದರಲ್ಲಿ ರಾಜನಿಗೆ ಬದಲಾಗಿ "ಪ್ರೆಸಿಡೆಂಟ್" ಎಂಬ ಪ್ರಜಾಧ್ಯಕ್ಷನು ರಾಜ್ಯಶಕ್ತಿಗೆ ಪ್ರಧಾನಾಂಗವಾಗಿರುವನು. ರಾಜನು ವಂಶಾನುಕ್ರಮದಿಂದ ಬಂದ ಆಜೀವಾಧಿಕಾರಿ; ಪ್ರಜಾಧ್ಯಕ್ಷನಾದರೋ ಆಗಾಗ ಪ್ರಜಾಭಿಮತದಿಂದ ಆರಿಸಲ್ಪಟ್ಟವನಾಗಿ, ಕ್ಲುಪ್ತಕಾಲಾವಧಿಯ ತರುವಾಯ (ಅಥವಾ ಪ್ರಜಾಭಿಮತವು ವಿರೋಧಿಯಾದೊಡನೆಯೆ) ಅಧಿಕಾರವನ್ನು ಬಿಡತಕ್ಕವನು. ಮೇಲಿನ ಎರಡು ವಿಧದ ಸರಾಜಕ ವ್ಯವಸ್ಥೆಗಳಲ್ಲಿ, ಅಧಿಕಾರಿವರ್ಗ ಪ್ರಜಾಪ್ರತಿನಿಧಿಸಭೆಗಳೆಂಬ ಭಾಗಗಳಲ್ಲಿರುವ ವ್ಯಕ್ತಿಗಳು ಆಗಾಗ ಬದಲಾಯಿಸುತ್ತಿದ್ದರೂ, ರಾಜನೊಬ್ಬನು ಮಾತ್ರ ಬಹುಕಾಲ ಬದಲಾಯಿಸದೆ ರಾಜ್ಯಯಂತ್ರಕ್ಕೆ ದಾರ್ಢ್ಯವನ್ನುಂಟುಮಾಡುತ್ತಿರುವನು. ಈ ಕೇವಲ ಪ್ರಜಾವ್ಯವಸ್ಥೆಯಲ್ಲಾದರೋ, ಪ್ರತಿ

ನಿಧಿಸಭೆಗಳ ಸದಸ್ಯರೂ ಪ್ರಜಾಧ್ಯಕ್ಷನೂ ಸಹ ಆಗಾಗ ಹೊಸ ಹೊಸದಾಗುತ್ತಿರುವರು. ಅವರೆಲ್ಲರನ್ನೂ ಒಟ್ಟುಗೂಡಿಸಬಲ್ಲ ರಾಜನಂತಹ ಸ್ಥಾಯಿಯಾದ ಸಂಸ್ಥೆಯೊಂದು ಇದರಲ್ಲಿರದು.

**ಪ್ರಜಾನಿರ್ಧಾರ**—ಇಷ್ಟೇ ಅಲ್ಲದೆ, ಒಂದು ಜನತಾರಾಷ್ಟ್ರದಲ್ಲಿ ಪ್ರತಿನಿಧಿಸಭೆಗಳು ಈಗ ಕೆಲವು ದೇಶಗಳಲ್ಲಿರುವಂತೆ ಎರಡಾಗಿದ್ದು, ಅವೆರಡಕ್ಕೂ ಭಿನ್ನಾಭಿಪ್ರಾಯಗಳುಂಟಾಗಿ ವಿವಾದವು ಬೆಳೆಯುತ್ತಿದ್ದರೆ, ಅಂಥಾ ವಿವಾದಾಂಶವನ್ನು ಆ ಸಭೆಗಳಲ್ಲಿಯ ಪ್ರತಿನಿಧಿಗಳನ್ನಾರಿಸಿದ ಮೂಲಪ್ರಜೆಗಳ ತೀರ್ಮಾನಕ್ಕೇ ಹಾಕಬೇಕೆಂಬ ನಿಬಂಧನೆಯೂ ಇರುವುದುಂಟು. ಹೀಗೆ ಪ್ರಜಾಪ್ರತಿನಿಧಿಗಳನ್ನು ಬಿಟ್ಟು, ಪ್ರಜೆಗಳನ್ನೇ ಪ್ರತ್ಯಕ್ಷ ನಿರ್ಣಯಕೊಡಬೇಕೆಂದು ಕೇಳುವ ಪದ್ಧತಿಗೆ "ರೆಫರೆಂಡಂ" (ಪ್ರಜಾನಿರ್ಧಾರ) ಎಂದು ಹೆಸರು.

**ಪ್ರಜಾನಿರ್ದೇಶ**—ಪ್ರಜೆಗಳಲ್ಲಿ ಒಂದು ಗೊತ್ತಾದ ಸಂಖ್ಯೆಯಷ್ಟು ಮಂದಿ ಜನರು ಯಾವುದಾದರೊಂದು ಕಾಯಿದೆ ಅಥವಾ ಕಟ್ಟುಪಾಡು ಆವಶ್ಯಕವೆಂದು ತಾವಾಗಿಯೇ ಸರ್ಕಾರಕ್ಕೆ ಸೂಚಿಸಿದರೆ, ಆಗ ಆ ವಿಷಯವನ್ನು ಸರ್ಕಾರವು ಪ್ರಜೆಗಳೆಲ್ಲರ ತೀರ್ಮಾನಕ್ಕೆ ಹಾಕಿಯೇ ತೀರಬೇಕೆಂದೂ, ಹಾಗಾದ ನಿರ್ಣಯವನ್ನು ಪ್ರತಿನಿಧಿಸಭೆಗಳೂ ಸರ್ಕಾರವೂ ಅಂಗೀಕರಿಸಲೇ ಬೇಕೆಂದೂ ಕೆಲವೆಡೆ ನಿಬಂಧನೆಯುಂಟು. ಹೀಗೆ ಪ್ರತಿನಿಧಿಗಳನ್ನಪೇಕ್ಷಿಸದೆಯೇ ಪ್ರಜೆಗಳ ಪ್ರತ್ಯಕ್ಷ ಅಪ್ಪಣೆಯಂತೆ ಶಾಸನ ಮಾಡುವ ಪದ್ಧತಿಗೆ "ಇನಿಷಿಯೇಟಿವ್" (ಪ್ರಜಾನಿರ್ದೇಶ) ಎಂದು ಹೆಸರು.

ಜನತಾವ್ಯವಸ್ಥೆಯ ಈ ವಿಶೇಷ ಲಕ್ಷಣಗಳು ಹೆಚ್ಚಾಗಿ ಕಾಣಬರುವುದು ಅಮೆರಿಕದ ಸಂಯುಕ್ತರಾಷ್ಟ್ರದ ಕೆಲವು ಭಾಗಗಳಲ್ಲಿ ಮತ್ತು ಯುರೋಪಿನ ಸ್ವಿಟ್ಜರ್ಲೆಂಡ್ ದೇಶದಲ್ಲಿ ಮಾತ್ರ.

ಒಟ್ಟಿನ ಮೇಲೆ, ಕೇವಲ ಪ್ರಜಾಪ್ರಭುತ್ವವು ಇದುವರೆಗೂ ಸಮರ್ಪಕವಾಗಿ ನಡೆದು, ಬಹು ವರ್ಷಗಳ ಬೆಳೆವಣಿಗೆಯಿಂದ

ಸುಪ್ರತಿಷ್ಠಿತವಾಗಿರುವುದು ಸಂಯುಕ್ತರಾಷ್ಟ್ರ, ಫ್ರಾನ್ಸು, ಸ್ವಿಟ್ಜರ್ಲೆಂಡ್—ಈ ದೇಶಗಳಲ್ಲಿ ಮಾತ್ರ. ಈಚೆಗೆ ಯೂರೋಪು ಖಂಡದ ಅನೇಕ ದೇಶಗಳಲ್ಲಿ ಪ್ರಜಾವ್ಯವಸ್ಥೆಯು ಸ್ಥಾಪಿತ ವಾಗಿದ್ದರೂ, ಅದು ರಷ್ಯ ಮೊದಲಾದ ಪ್ರದೇಶಗಳಲ್ಲಿ "ಕಮ್ಯೂನಿಸಂ," ಎಂಬ ವಿಪರೀತ ರೂಪವನ್ನು ತಾಳಿ ಇನ್ನೂ ಪರೀಕ್ಷಾ ದಶೆಯಲ್ಲಿದೆ.

## ಪ್ರಜಾನಿಹಿತ ಸರಾಜಕವ್ಯವಸ್ಥೆಯ ಗುಣಗಳು

ಮೇಲಿನ ಮೂರನೆಯ ಜಾತಿಯದಾದ ಪ್ರಜಾಪ್ರತಿನಿಧಿಸಹಿತ ಸರಾಜಕ ವ್ಯವಸ್ಥೆಯಲ್ಲಿ ಉಳಿದ ಮೂರು ಬಗೆಯ ವ್ಯವಸ್ಥೆಗಳ ದೋಷಾಂಶಗಳಿಲ್ಲದೆ, ಅವುಗಳ ಗುಣಾಂಶಗಳು ಕೂಡಿರುತ್ತ ವೆಂದು ಹೇಳಬಹುದು. ಮೊದಲನೆಯದಾದ ನಿರಂಕುಶಪ್ರಭುತ್ವ ದಲ್ಲಿ ರಾಜಸ್ವೇಚ್ಛೆಯ ವೈಪರೀತ್ಯಕ್ಕೆ ಅವಕಾಶವುಂಟು; ನಾಲ್ಕನೆಯದಾದ ಪ್ರಜಾಯಾಜಮಾನ್ಯದಲ್ಲಿ ಅಸಂಸ್ಕೃತ ಜನ ಸಂಘಾತದ ವೈಪರೀತ್ಯಕ್ಕೆ ಅವಕಾಶವುಂಟು. ಇವೆರಡೂ ಇಂಗ್ಲೆಂಡಿನಂಥ ರಾಜ್ಯದಲ್ಲಿ ಕಾಲಿಡಲಾಗುವುದಿಲ್ಲ. ನಿರಂಕುಶ ಪ್ರಭುತ್ವದಲ್ಲಿ ರಾಜ್ಯಸೂತ್ರವು ಒಂದೇ ಕೈಯಲ್ಲಿ ನಿಂತು, ರಾಜ್ಯ ಯಂತ್ರದ ಚಾಂಚಲ್ಯಕ್ಕೆ ಅವಕಾಶವಿಲ್ಲದೆ ಹೋಗಿ, ರಾಜ್ಯ ಕಾರ್ಯಗಳು ಸರಾಗವಾಗಿ ನಡೆಯಲು ಅನುಕೂಲವಾಗಿರು ತ್ತದೆ; ಕೇವಲ ಪ್ರಜಾಧೀನಪ್ರಭುತ್ವದಲ್ಲಿ ರಾಜ್ಯವಿಚಾರಗಳು ಬಹುಮುಖವಾಗಿ ಪರ್ಯಾಲೋಚಿಸಲ್ಪಟ್ಟು, ರಾಜ್ಯಾಧಿಕಾರಿ ಗಳ ಸ್ವೇಚ್ಛಾನುವರ್ತನೆಗೆ ಅವಕಾಶವಿಲ್ಲದೆ ಹೋಗಿ, ರಾಜ್ಯ ಕಾರ್ಯಗಳು ಜನರಂಜಕವಾಗಲು ಅನುಕೂಲವಾಗುತ್ತದೆ. ಈ ಎರಡು ವಿಧದ ಸೌಕರ್ಯಗಳೂ ಸರಾಜಕವಾದ ಪ್ರಜಾಪ್ರತಿನಿಧಿ ಸಹಿತ ವ್ಯವಸ್ಥೆಯಲ್ಲಿ ಕಾಣಬರುವುವು. ಈ ವ್ಯವಸ್ಥೆಯೇ ನಿಜ ವಾದ ವ್ಯವಸ್ಥೆ; ಏಕೆಂದರೆ ಉಳಿದೆರಡು ವ್ಯವಸ್ಥೆಗಳೂ ಸುಲಭ ವಾಗಿಯೂ, ಬೇಗನೆಯೂ, ಅವ್ಯವಸ್ಥೆಗೆ ಬರಬಹುದು; ಇದು

ಅಷ್ಟು ಸುಲಭವಾಗಿ ಕದಲಲಾರದು; ಕದಲಿದರೂ ಬೇಗನೆ ಸ್ತಿಮಿತಕ್ಕೆ ಬರುವುದು; ಆದ್ದರಿಂದ ಇದು ಸುವ್ಯವಸ್ಥೆ:— ಹೀಗೆಂಬುದು ಅರಿಸ್ಟೋಟಲಿನ ತಾತ್ಪರ್ಯ.

ನಿರಂಕುಶರಾಜ್ಯವು ಈಗ ಲೋಕದಲ್ಲಿ ಇಲ್ಲದಂತೆಯೇ ಆಗಿದೆಯೆಂದು ಆಗಲೇ ಹೇಳಿದೆವಷ್ಟೆ? ಪ್ರಜಾರಾಜ್ಯದ ಕೆಲವು ನ್ಯೂನತೆಗಳನ್ನು ಮೇಲೆ ಸೂಚಿಸಿರುವುದರಿಂದ ಆ ವ್ಯವಸ್ಥೆಯು ಸರ್ವತ್ರ ದೂಷ್ಯವೆಂದು ಅರ್ಥಮಾಡಲಾಗದು. ಆ ಲೋಪಗಳನ್ನು ಅಮೆರಿಕ, ಫ್ರಾನ್ಸು ಮೊದಲಾದ ದೇಶಗಳವರು ಸರಿಪಡಿಸಿಕೊಂಡು ಸಮರ್ಪಕವಾಗಿ ರಾಜ್ಯನಿರ್ವಾಹ ಮಾಡುತ್ತಿರುವರೆಂದೂ ಮೇಲೆ ಹೇಳಿದೆ. ಕೇವಲ ಪ್ರಜಾಪ್ರಭುತ್ವವು ತೃಪ್ತಿಕರವಾಗುವುದಕ್ಕೆ ಪ್ರಜೆಗಳಲ್ಲಿ ಕೆಲವು ತೆರದ ಗುಣವಿಶೇಷಗಳು ಇರಬೇಕು. ಆ ಗುಣಗಳು ಅನುಭವವಿಶೇಷದಿಂದಲೂ ಸಂದರ್ಭವಿಶೇಷಗಳಿಂದಲೂ ಹುಟ್ಟತಕ್ಕವು. ಫ್ರಾನ್ಸು, ಅಮೆರಿಕ, ಸ್ವಿಟ್‌ಜರ್ಲೆಂಡ್ ದೇಶಗಳ ಚರಿತ್ರೆಗಳಂತೆ ಇತರ ದೇಶಗಳ ಚರಿತ್ರೆಗಳಿಲ್ಲ. ಆದಕಾರಣ ಆ ದೇಶಗಳ ವ್ಯವಸ್ಥೆಗಳು ಇತರ ದೇಶಗಳಿಗೆ ಹೇಗೆ ಅನ್ವಯಿಸಲಾರದೆಂಬುದನ್ನು ಸೂಚಿಸುವುದು ಮಾತ್ರವೇ ಮೇಲೆ ನಮ್ಮ ಉದ್ದೇಶ.

ಮನುಷ್ಯನು ಪರಸ್ಪರ ವಿರುದ್ಧಗಳಾದ ಗುಣಗಳ ಮೂಟೆ. ಸ್ನೇಹ, ದ್ವೇಷ; ಔದಾರ್ಯ, ಕಾರ್ಪಣ್ಯ; ಉತ್ಸಾಹ, ಉಪೇಕ್ಷೆ; ದಯೆ, ಕೋಪ; ಲೋಕಹಿತ ಚಿಂತನೆ, ಸ್ವಾರ್ಥತೆ— ಇವೇ ಮೊದಲಾದ ದ್ವಂದ್ವಗಳು ಅವನಲ್ಲಿ ಸಹಜವಾಗಿ ತುಂಬಿರುತ್ತವೆ. ಈ ಗುಣಗಳಲ್ಲಿ ಸಮಾಜಸಾಧಕಗಳಾದವೂ ಸಮಾಜಬಾಧಕಗಳಾದವೂ ಎರಡೂ ಇರುತ್ತವೆ. "ಸ್ವಜನರು ಬೇಕು; ಬಂಧುಮಿತ್ರರು ಬೇಕು; ಸಹವಾಸ ಬೇಕು; ಸಮಾಜ ಬೇಕು," ಎನ್ನಿಸುವ ಪ್ರವೃತ್ತಿಯು ಮನುಷ್ಯನಲ್ಲಿ ಹುಟ್ಟುಗುಣವಾಗಿ ಇರುತ್ತದೆ. ಇದರೊಡನೆಯೇ "ಇವನು ಬೇಡ; ಅವನು ದೂರ ಹೋಗಲಿ; ಇವರಿಂದ ಇದನ್ನು ಕಿತ್ತುಕೊಳ್ಳಬೇಕು; ಅವರಿಗೆ ಅದು

ದಕ್ಕದಂತೆ ಮಾಡಬೇಕು " ಎನ್ನಿಸುವ ಪ್ರವೃತ್ತಿಯೂ ಸ್ವಾಭಾವಿಕವಾಗಿಯೇ ಹಿಂದುಗೂಡಿ ಬಂದಿರುತ್ತದೆ.

ಅಲ್ಲದೆ, ಒಂದೇ ಗುಣವೇ ಜನದ ಒಂದವಸ್ಥೆಯಲ್ಲಿ ಸಾಧಕವೂ ಮತ್ತೊಂದವಸ್ಥೆಯಲ್ಲಿ ಬಾಧಕವೂ ಆಗಬಹುದು. ಮತಾಭಿಮಾನವು ಒಂದು ಹದ್ದಿನೊಳಗಿದ್ದರೆ ವಾಙ್ನಿಯಮ ಮನೋನಿಯಮಗಳನ್ನು ಕಲಿಸುವುದಾಗಿ ಪರಹಿತದಲ್ಲಿ ಪರಿಣಮಿಸುವುದು ; ಆ ಹದ್ದನ್ನು ಮೀರಿದರೆ ಅದು ಅನ್ಯಮತ ವಿಷಯದಲ್ಲಿ ಅಸಹನೆಯಾಗಿ ಜನೈಕಮತ್ಯಕ್ಕೆ ಹಾನಿಯನ್ನು ತರುವುದು. ಗೃಹಸ್ಥತನವು ಒಂದು ಮಿತಿಯಲ್ಲಿದ್ದರೆ ನೆರೆಹೊರೆಯ ವಿಷಯದಲ್ಲಿ ಕ್ಷೇಮ ಚಿಂತನೆಯನ್ನೂ ಬಡವರ ವಿಷಯದಲ್ಲಿ ಕನಿಕರವನ್ನೂ ಹುಟ್ಟಿಸುವುದಾಗಿರುವುದು; ಬೇರೊಂದು ಸ್ಥಿತಿಯಲ್ಲಿ ಅದು ಸ್ವಾರ್ಥೈಕತೆಯೆನಿಸಿ ಸಾರ್ವಜನಿಕ ಹಿತಕ್ಕೆ ಪ್ರತಿಕಕ್ಷಿಯಾಗುವುದು. ಹೀಗಿರುವುದರಿಂದ, ಮನುಷ್ಯನ ಗುಣಗಳನ್ನು ಸಮಾಜಸಾಧಕಗಳಾಗುವಂತೆ ತಿದ್ದುವುದು—ಎಂದರೆ ಪರೋಪಕಾರ ಪರ್ಯವಸಾಯಿಗಳಾದ ಗುಣಭಾಗಗಳನ್ನು ಬಲಪಡಿಸಿ, ಲೋಕಕಂಟಕಗಳಾಗುವ ಗುಣಭಾಗಗಳನ್ನು ಅಣಗಿಸುವುದು—ರಾಜ್ಯದ ಎರಡು ಕರ್ತವ್ಯಗಳಲ್ಲೊಂದು. ಮತ್ತೊಂದು ಜನರ ಇಹಲೋಕದ ಸುಖಸಾಧನಗಳ ವೃದ್ಧಿಗೆ ಸಹಾಯವಾಗುವುದು. ಈ ಎರಡನೆಯ ಕರ್ತವ್ಯವು ನಿರಂಕುಶಪ್ರಭುತ್ವದಿಂದಲೂ ಚೆನ್ನಾಗಿ ನೆರವೇರಬಹುದು. ರಷ್ಯಾದೇಶದ ಪೀಟರ್, ಫ್ರಾನ್ಸಿನ ನೆಪೋಲಿಯನ್, ನಮ್ಮ ಟಿಪ್ಪೂ ಸುಲ್ತಾನ್—ಇಂಥ ನಿರಂಕುಶಪ್ರಭುಗಳು ತಮ್ಮ ತಮ್ಮ ದೇಶಗಳ ಸಂಪದಭಿವೃದ್ಧಿಗಾಗಿಯೂ ಪರಾಕ್ರಮೋನ್ನತಿಗಾಗಿಯೂ ಅನೇಕ ಕಾರ್ಯಗಳನ್ನು ನಡೆಯಿಸಿರಬಹುದು. ಆದರೆ ರಾಜ್ಯದ ಪ್ರಥಮ ಕರ್ತವ್ಯವಾದ ಸೌಜನ್ಯಪ್ರಚಾರವು ಪ್ರಜಾಧಿಕಾರಾಸ್ಪದವಾದ,—ಎಂದರೆ ಇಂಗ್ಲೆಂಡಿನಲ್ಲಿರುವಂತೆ ಪ್ರಜೆಗಳಿಗೂ ರಾಜ್ಯಭಾರದಲ್ಲಿ ಒಂದು ಭಾಗವನ್ನು ಕೊಟ್ಟಿರುವ,—ವ್ಯವಸ್ಥೆಯಲ್ಲಿ ಆಗುವಂತೆ ಇತರ ವ್ಯವಸ್ಥೆಯಲ್ಲಿ ಆಗಲಾರದು.

ರಾಜ್ಯವು ಧರ್ಮವನ್ನು ಸಂರಕ್ಷಿಸಲು ಸೃಷ್ಟಿಯಾದದ್ದು ಎಂಬ ಮನ್ವಾದಿಗಳ ಮತವೂ, ರಾಜ್ಯವು ಸುಗುಣಗಳನ್ನು ಕಲಿಸಲು ಹುಟ್ಟಿದ್ದು ಎಂಬ ಅರಿಸ್ಟೋಟಲ್, ಬರ್ಕ್ ಇತ್ಯಾದಿಗಳ ಮತವೂ ವಾಚಕರಿಗೆ ಜ್ಞಾಪಕದಲ್ಲಿರಬಹುದು. ಧರ್ಮವನ್ನು ಸಂರಕ್ಷಿಸುವ,—ಸುಗುಣಗಳನ್ನು ಅಭಿವೃದ್ಧಿಪಡಿಸುವ,—ಕಾರ್ಯವು ರಾಜ್ಯದಿಂದ ಎರಡು ರೀತಿಯಲ್ಲಿ ನಡೆಯಬಹುದು. ಒಂದು ದುಷ್ಟಶಿಕ್ಷಣೆಯ ರೀತಿ. ಇದು ಕಾನೂನು, ಕೋರ್ಟು, ಪೋಲೀಸು ಮೊದಲಾದ ಸಂಸ್ಥೆಗಳ ಮೂಲಕ ನಡೆಯತಕ್ಕದು. ಇವು ದುರ್ಗುಣಗಳನ್ನು ನಿಗ್ರಹಮಾಡುವ ಕೆಲಸಕ್ಕೆ ಮಾತ್ರ ಉಪಯುಕ್ತವಾದುವು. ಇದನ್ನು ಇಂಗ್ಲಿಷಿನಲ್ಲಿ "ನೆಗೆಟಿವ್" ಎಂದು ಹೇಳುವ "ನಿವಾರಕ" ಕ್ರಮವೆಂದು ಗಣಿಸಬಹುದು. ಇನ್ನೊಂದು "ಪಾಸಿಟಿವ್" ಅಥವಾ "ನಿಧಾಯಕ" ಕ್ರಮ. ಇದು ಸದ್ಗುಣಗಳನ್ನು ಅಭಿವೃದ್ಧಿಮಾಡತಕ್ಕದ್ದು. ಬಾಲಕರ ಮತ್ತು ಯುವಕರ ಮಟ್ಟಿಗೆ ಈ ರೀತಿಯ ಕಾರ್ಯವು ದೇಶದ ವಿದ್ಯಾಶಾಲೆಗಳಲ್ಲಿ ಸ್ವಲ್ಪದೂರ ನಡೆಯಬಹುದು. ಆದರೆ ಪ್ರೌಢರೂ ಲೋಕಕಾರ್ಯದಲ್ಲಿ ಹೆಚ್ಚು ಭಾಗಿಗಳೂ ಆದವರ ಸುಗುಣಗಳನ್ನು ಪ್ರೋತ್ಸಾಹಿಸಿ ಪ್ರಕಾಶಕ್ಕೆ ತರಲು ಬಗೆಬಗೆಯ ರಾಜ್ಯಸಂಸ್ಥೆಗಳೇ ಅತ್ಯುತ್ತಮಗಳಾದ ಸಾಧನಗಳು. ಗ್ರಾಮಪಂಚಾಯತಿಸಭೆ (ವಿಲೇಜ್ ಯೂನಿಯನ್), ಪೌರಸಭೆ (ಮ್ಯುನಿಸಿಪಾಲಿಟಿ), ಪ್ರಜಾಪ್ರತಿನಿಧಿಸಭೆ (ರೆಪ್ರೆಸೆಂಟೆಟಿವ್ ಅಸೆಂಬ್ಲಿ)—ಇವೇ ಮೊದಲಾದ ಪ್ರಜಾತ್ಮಕಗಳಾದ ರಾಜ್ಯಸಂಸ್ಥೆಗಳು ಜನರಲ್ಲಿರುವ ದೇಶಾಭಿಮಾನ ಧರ್ಮಾಭಿಮಾನಗಳನ್ನು ವ್ಯಕ್ತಪಡಿಸಲು ಸಾಧನಗಳಾಗುತ್ತವೆ. ಈ ಸಂಸ್ಥೆಗಳಿಗೆ ಪ್ರತಿನಿಧಿಗಳನ್ನಾರಿಸುವವರೂ, ಪ್ರತಿನಿಧಿಗಳಾಗಿ ಆರಿಸಲ್ಪಟ್ಟವರೂ, ಇಂಥ ಸಂಸ್ಥೆಗಳಿಗೆ ಅಂಗಗಳಾದ ಇತರ ಸಂಘ ಸಭೆ ಸಮಿತಿಗಳ ಸದಸ್ಯರೂ ತಮ್ಮ ತಮ್ಮ ಕೆಲಸಗಳನ್ನು ಮಾಡುವುದರಲ್ಲಿ ತಮ್ಮ 'ದೇಶಪ್ರೀತಿ, ಸರ್ವಸಮತೆ, ನಿಷ್ಪಕ್ಷಪಾತತೆ, ಲೋಕಹಿತೇಚ್ಛೆ,

ಸತ್ಕಾರ್ಯೋತ್ಸಾಹ ಇವೇ ಮೊದಲಾದ ಉಚ್ಚತರದ ಗುಣಗಳನ್ನು ಅನುಷ್ಠಾನಕ್ಕೆ ತಂದು ತೋರಲು ಅವಕಾಶಗಳನ್ನು ಪಡೆಯುವರು. ಹೀಗೆ ಪ್ರಜಾಪ್ರಮುಖರು ಉದಾತ್ತಭಾವಗಳನ್ನು ಪ್ರಕಾಶಪಡಿಸುವುದರಿಂದ ಇತರರಲ್ಲಿಯೂ ಆ ಭಾವಗಳು ವ್ಯಾಪಿಸಿ ಜನಜೀವನವೆಲ್ಲವೂ ಉತ್ತಮವಾಗಬಹುದು. ಇದು "ಬಹುದು" ಎಂಬ ಊಹೆಯ ಅಥವಾ ಅಂದಾಜಿನ ಮಾತಲ್ಲ. ಇಂಗ್ಲೆಂಡಿನ ಸಂಪತ್ತೂ, ಬಲವೂ, ಅಲ್ಲಿರುವ ವಿಜ್ಞಾನಸಾಹಿತ್ಯಗಳ ಪ್ರಾಚುರ್ಯವೂ, ನಾಗರಿಕತೆಗೆ ಬಂದಿರುವ ದೇಶಗಳಲ್ಲಿ ಅದಕ್ಕೆ ದೊರೆತಿರುವ ಮನ್ನಣೆಯೂ, ನಾವು ಹೇಳಿರುವ ಮಾತಿಗೆ ನಿದರ್ಶನವಾಗಿವೆ. ಅಲ್ಲಿಯ ರಾಜ್ಯಸಂಸ್ಥೆಗಳ ಮೂಲಕ ಆ ಜನದ ಸ್ವದೇಶಪ್ರೇಮವೂ ತತ್ಸಾಧನಗಳಾದ ಪೌರುಷಪ್ರಯತ್ನಗಳೂ ವಿಕಾಸಹೊಂದಿವೆ. ಈ ಗುಣ ಬುದ್ಧಿವಿಕಾಸದಿಂದ ಜನಪದೋನ್ನತಿಯು ಫಲಿಸಿದೆ. ಹೀಗಿರುವುದರಿಂದ, ಪ್ರಜೆಗಳಿಗೆ ತಕ್ಕಷ್ಟು ಅಧಿಕಾರವನ್ನು ಕೊಟ್ಟಿರುವ ರಾಜ್ಯವು ಒಂದು ಬಗೆಯ ಧಾರ್ಮಿಕ ಸಂಸ್ಥೆಯೆಂಬುದಕ್ಕೆ ಸಂದೇಹ ತೋರದು. ಮಠ, ದೇವಾಲಯ, ವಿದ್ಯಾಲಯಗಳಿಗೆ ಜೊತೆಗೂಡುವ ಸಂಸ್ಥೆ ರಾಜ್ಯ. ಈ ಅಭಿಪ್ರಾಯವನ್ನು ಮಹನೀಯರಾದವರು ನಮ್ಮಲ್ಲಿಯೂ ಪಾಶ್ಚಾತ್ಯರಲ್ಲಿಯೂ ಸಹ ಸೂಚಿಸಿದ್ದಾರೆ.

---

# ೯. ರಾಜ್ಯಯಂತ್ರದ ರಚನೆ

## ಭಾಗ ೧

ನಮ್ಮ ದೇಹಶಕ್ತಿಯು ಕೈ ಬಾಯಿ ಮೊದಲಾದ ಕರಣಗಳ (ಅಥವಾ ಅವಯವಗಳ) ಮೂಲಕ ಕೆಲಸಗಳನ್ನು ನಡಸುವಂತೆ, ರಾಜ್ಯಶಕ್ತಿಯು ಕಾರ್ಯಭಾರೀವರ್ಗ ಪ್ರಜಾಸಭೆಗಳೆಂಬ ಸಂಸ್ಥೆಗಳ ರೂಪವಾದ ಕರಣಗಳ ಮೂಲಕ ಕೆಲಸಮಾಡುತ್ತದೆ. ಈ ಕರಣಗಳು ತಕ್ಕಂತೆ ಕೆಲಸಮಾಡುವ ಹಾಗೆ ಜೋಡಿಸಲ್ಪಟ್ಟಿರುವ ಸ್ಥಿತಿಯಲ್ಲಿ ಅವುಗಳ ಸಮುಚ್ಚಯಕ್ಕೆ ರಾಜ್ಯಯಂತ್ರವೆಂದು ಹೆಸರು. ಅದೇ ಸರಕಾರ—ಸರ್ಕಾರ. ಈ ಯಂತ್ರದಲ್ಲಿ ಸಾಮಾನ್ಯವಾಗಿ ಮೂರು ಮುಖ್ಯ ಭಾಗಗಳಿರುತ್ತವೆ. ಅವು ಮೂರು ಬಗೆಯ ಕಾರ್ಯಗಳನ್ನು ಮಾಡುತ್ತವೆ.

(೧) **ಶಾಸನ ರಚನೆ**—"ಲೆಜಿಸ್ಲೇಷನ್", ಎಂದರೆ ಕಾಯಿದೆ ಕಾನೂನುಗಳನ್ನು ಮಾಡಿಡುವುದು ;

(೨) **ಕಾರ್ಯನಿರ್ವಾಹ**—"ಎಕ್ಸೆಕ್ಯೂಟಿವ್"—ಎಂದರೆ ಗೊತ್ತಾದ ಕಾನೂನು ಕಾಯಿದೆಗಳಿಗೆ ಅನುಸಾರವಾಗಿ ಬಗೆ ಬಗೆಯ ಸಾರ್ವಜನಿಕ ಕಾರ್ಯಗಳನ್ನು ಆಗಮಾಡಿಸುವುದು ;

(೩) **ನ್ಯಾಯನಿರ್ಣಯ**—"ಜ್ಯುಡಿಷಿಯರಿ"—ಎಂದರೆ ಗೊತ್ತಾಗಿರುವ ಕಾನೂನು ಕಾಯಿದೆಗಳಿಗೆ ಸರಿಯಾದ ಅರ್ಥವನ್ನು ನಿಷ್ಕರ್ಷೆಮಾಡಿ ವಿವಾದಸಂದರ್ಭಗಳಿಗೆ ಅವುಗಳನ್ನು ಅನ್ವಯಗೊಳಿಸಿ ತೀರ್ಮಾನಿಸುವುದು.

ಈ ಮೂರು ವಿಧದ ರಾಜ್ಯಕಾರ್ಯಗಳನ್ನೂ ನಡೆಯಿಸುವುದಕ್ಕೆ ಪ್ರತ್ಯೇಕಪ್ರತ್ಯೇಕವಾದ "ಕರಣ"ಗಳನ್ನು, ಎಂದರೆ ಸಂಸ್ಥೆಗಳನ್ನೂ ಅಧಿಕಾರಿವರ್ಗಗಳನ್ನೂ, ಇಟ್ಟುಕೊಂಡಿರುವುದು ಈಗಿನ ಪಾಶ್ಚಾತ್ಯಪದ್ಧತಿ. ಪುರಾತನ ಹಿಂದೂರಾಜ್ಯಗಳಲ್ಲಿ ಈ ತೆರ

ನಾದ ಅಧಿಕಾರವಿಭಜನೆಯು ಇತ್ತೆಂದು ಹೇಳಲು ಆಗುವುದಿಲ್ಲ. ಆದರೆ ಆಗ ಅಧಿಕಾರವಿಭಜನೆ ಬೇರೊಂದು ವಿಧದಲ್ಲಿತ್ತು. ಕೋಶಾಧ್ಯಕ್ಷ, ಸೇನಾಪತಿ, ನ್ಯಾಯಾಧಿಪತಿ, ಧರ್ಮಾಧ್ಯಕ್ಷ ಮೊದಲಾದ ಬೇರೆಬೇರೆ ಅಧಿಕಾರಿಗಳಲ್ಲಿ ರಾಜ್ಯಶಕ್ತಿಯ ಅಂಶ ಗಳನ್ನು ಹಂಚಿ, ಅವರ ಕೈಯಿಂದ ಕೆಲಸಗಳನ್ನು ಮಾಡಿಸುವ ಪದ್ಧತಿಯ ಸೂಚನೆಗಳು ನಮ್ಮ ಗ್ರಂಥಗಳಲ್ಲಿ ಕಾಣಬರುತ್ತವೆ. ಕೌಟಿಲ್ಯನ ಅರ್ಥಶಾಸ್ತ್ರದಲ್ಲಂತೂ ಬಗೆಬಗೆಯ ಇಲಾಖೆ ಗಳ ಹೆಸರುಗಳೂ, ಅವುಗಳ ಸಿಬ್ಬಂದಿ (ಅಥವಾ ಅಧಿಕಾರಿವರ್ಗ) ಗಳ ವಿವರವೂ, ಅವುಗಳ ಕರ್ತವ್ಯಗಳ ವಿವರವೂ ಸ್ಪಷ್ಟವಾಗಿ ಹೇಳಲ್ಪಟ್ಟಿವೆ. ಆದರೆ ಮೇಲೆ ತೋರಿಸಿರುವ ರೀತಿಯಲ್ಲಿ ರಾಜ್ಯಾಧಿಕಾರವನ್ನು ಮೂರಾಗಿ ಪ್ರತ್ಯೇಕಗೊಳಿಸಬೇಕಾದ ಆವಶ್ಯಕತೆಯು ಆ ಕಾಲದಲ್ಲಿ ಬಹುಶಃ ನಮ್ಮವರಿಗೆ ಇರಲಿಲ್ಲ ವೆಂದು ತೋರುತ್ತದೆ. ಪಾಶ್ಚಾತ್ಯ ರಾಜ್ಯಗಳಲ್ಲಿಯೂ ಈ ಅಧಿ ಕಾರವಿಭಜನೆಯು ಕಾಲಕ್ರಮದಲ್ಲಿ ಆದದ್ದು ; ಅನಾದಿಯಾಗಿ ಬಂದದ್ದಲ್ಲ. ಅದಲ್ಲದೆ ಈ ಏರ್ಪಾಟು ಈಗಲೂ ಅಲ್ಲಿ ಎಲ್ಲಿಯೂ ಆಮೂಲಾಗ್ರವಾಗಿರುವಂತೆ ಕಾಣಬರುವುದಿಲ್ಲ. ಅಧಿಕಾರ ವಿಭಜನೆಯು ಪ್ರಜಾಕ್ಷೇಮಕ್ಕೆ ಅತ್ಯಂತಾವಶ್ಯಕವಾದ ಏರ್ಪಾಟೆಂಬ ಅಭಿಪ್ರಾಯವು ಒಂದಾನೊಂದು ಕಾಲದಲ್ಲಿ ಇಂಗ್ಲೆಂಡು ಮುಂತಾದ ದೇಶಗಳಲ್ಲಿ ಪ್ರಬಲವಾಗಿದ್ದರೂ, ಆ ಏರ್ಪಾಟನ್ನು ಸಂಪೂರ್ಣವಾಗಿ ರೂಢಿಯಲ್ಲಿಟ್ಟುಕೊಳ್ಳುವುದು ಸಾಧ್ಯವಾಗಿಲ್ಲ. ಒಂದೊಂದು ಸಂದರ್ಭದಲ್ಲಿ ಮೇಲೆ ಹೇಳಿರುವ ಮೂರು ಕರಣಗಳಲ್ಲಿ ಒಂದು ಮತ್ತೊಂದರ ಕೆಲಸವನ್ನು ಸ್ವಲ್ಪ ಮಟ್ಟಿಗೆ ಮಾಡಬಹುದಾಗಿ, ಅಥವಾ ಮಾಡಬೇಕಾಗಿ, ಬರುವು ದುಂಟೆಂದು ಅನುಭವದಿಂದ ಗೊತ್ತಾಗಿದೆ. ಆದರೂ ಸ್ಥೂಲವಾಗಿ, ಸಾಧ್ಯವಾದಷ್ಟು ಮಟ್ಟಿಗೆ, ಮೂರು ಕರಣಗಳನ್ನೂ ಪ್ರತ್ಯೇಕಿ ಸಿಡುವುದೇ ಉತ್ತಮವೆಂದು ಎಲ್ಲರೂ ಸಾಧಾರಣವಾಗಿ ಅಂಗೀ ಕರಿಸಿದ್ದಾರೆ. ಆ ಏರ್ಪಾಟು ನಮ್ಮ ದೇಶದಲ್ಲಿಯೂ ಸ್ವಲ್ಪ

ಮಟ್ಟಿಗೆ ರೂಢಿಗೆ ಬಂದಿರುವುದರಿಂದ ಅದರ ಮೂಲತತ್ತ್ವ ವೇನೆಂಬುದನ್ನು ಇಲ್ಲಿ ಸಂಗ್ರಹವಾಗಿ ವಿವರಿಸಬಹುದು.

## ಶಾಸನಸಂಸ್ಥೆ—"ಲೆಜಿಸ್ಲೇಚರ್"

ಒಂದು ರಾಜ್ಯದ (ಅಥವಾ ರಾಜಕೀಯ ಸಮಾಜದ) ಪ್ರಜೆಯು (ಅಥವಾ ಸಾಮಾಜಿಕನೊಬ್ಬನು) ಯಾವ ವಿಧಿ ನಿಷೇಧರೂಪವಾದ ನಿಬಂಧನೆಗಳನ್ನು ಉಲ್ಲಂಘಿಸಿ ನಡೆದರೆ ಅವನಿಗೆ ರಾಜ್ಯಾಧಿಕಾರಿಗಳಿಂದ ಪ್ರತೀಕಾರವಾಗಬಲ್ಲುದೋ ಅಂಥ ನಿಬಂಧನೆಗಳಿಗೆ ಶಾಸನವೆಂದು ಹೆಸರು. ಇದನ್ನೇ "ಲಾ" ಎಂದೂ, "ಕಾನೂನು" ಎಂದೂ, "ಕಾಯಿದೆ" ಎಂದೂ ಕರೆಯುತ್ತಾರೆ. ಇಂಥ ರಾಜ್ಯಶಾಸನಗಳನ್ನು ಧರ್ಮ ಶಾಸ್ತ್ರವೆಂದೂ ನ್ಯಾಯಶಾಸ್ತ್ರವೆಂದೂ ಸಹ ಕರೆಯುವುದುಂಟು; ಆದರೆ ಈ ಪದಗಳಿಗೆ ಇತರ ಅರ್ಥಗಳೂ ಪ್ರಸಿದ್ಧಗಳಾಗಿರುವ ಕಾರಣ ಇಲ್ಲಿ ನಾವು "ಶಾಸನ"ವೆಂಬ ಮಾತನ್ನೇ ಸಾಮಾನ್ಯ ವಾಗಿ ಉಪಯೋಗಿಸಬಹುದೆಂದು ತೋರುತ್ತದೆ. ಶಾಸನವೆಂದರೆ ಆಳುವುದು. (೧) ಅಪ್ಪಣೆ ಕೊಡುವುದು, (೨) ಶಿಕ್ಷೆಮಾಡುವುದು —ಈ ಎರಡು ಕಾರ್ಯಗಳೂ ಶಾಸನವೆಂಬ ಮಾತಿನಲ್ಲಿ ಸೇರಿವೆ. ಶಾಸನ, ಶಾಸ್ತಿ, ಶಾಸ್ತ್ರ—ಇವೆಲ್ಲ ಒಂದೇ ಮೂಲಶಬ್ದದಿಂದ ಬಂದಿರುವ ಪದಗಳು. ವಿಧಾಯಕವೂ ದಂಡನೆಯೂ ಇರುವ ಆಜ್ಞಾರೂಪವಾದ ವಾಕ್ಯವೇ ಶಾಸನ. ಶಾಸನವೇ ಎಲ್ಲ ರಾಜ್ಯಕಾರ್ಯಗಳಿಗೂ ಮೂಲ; ಕಾರ್ಯನಿರ್ವಾಹಕರಾದ (ಎಕ್ಸೆಕ್ಯುಟಿವ್) ಅಧಿಕಾರಿಗಳೂ ನ್ಯಾಯನಿರ್ಣೇತರಾದ (ಜಡ್ಜಿ) ಅಧಿಕಾರಿಗಳೂ ಇಬ್ಬರೂ ಶಾಸನವನ್ನೇ ಅನುಸರಿಸಿ ಕೆಲಸಮಾಡಬೇಕಾದವರು. ಆದಕಾರಣ ಶಾಸನ ರಚನೆಯು ರಾಜ್ಯದ ಕರ್ತವ್ಯಗಳಲ್ಲಿ ಮೊದಲನೆಯದೆಂದು ಪರಿಗಣಿತ ವಾಗಿದೆ. ಇಷ್ಟು ಮುಖ್ಯವಾದ ಕಾರ್ಯವು ಪ್ರಜಾಭಿಪ್ರಾಯ

ದಂತೆಯೇ ಆಗಬೇಕೆಂಬುದು ಈಗ ಸರ್ವತ್ರ ಪ್ರಬಲಿಸಿರುವ ಭಾವನೆ. ಇದಕ್ಕನುಸಾರವಾಗಿ ಶಾಸನಗಳನ್ನು ರಚಿಸುವ ಅಧಿಕಾರವು ಈಗ ಎಲ್ಲೆಲ್ಲಿಯೂ ಒಬ್ಬರಿಬ್ಬರು ರಾಜ್ಯಾಧಿಕಾರಿಗಳ ಕೈಯಲ್ಲಿರದೆ, ಪಾರ್ಲಿಮೆಂಟಿನಂಥ ಪ್ರಜಾಪ್ರತಿನಿಧಿ ಸಭೆಗಳಿಗೆ ಬಂದಿದೆ. ರಾಜ್ಯಶಕ್ತಿಯ ಜನ್ಮಸ್ಥಾನವು ಪ್ರಜೆ, ಅಥವಾ ಸಮಾಜ; ಆ ಶಕ್ತಿಯ ಪರಮಪ್ರಯೋಜನವು ಪ್ರಜಾಭ್ಯುದಯ ಅಥವಾ ಸಮಾಜಹಿತ; ಹೀಗಿರಲಾಗಿ, ಆ ಶಕ್ತಿಯಿಂದ ಹುಟ್ಟಿ ಆ ಪ್ರಯೋಜನವನ್ನು ಸಾಧಿಸಬೇಕಾಗಿರುವ ಶಾಸನವು ಪ್ರಜಾವಿಹಿತವಾಗಿರಬೇಕೆನ್ನುವುದು ಸಹಜವಾಗಿಯೇ ಇದೆ. ಪೂರ್ವದ ಹಿಂದೂರಾಜ್ಯಗಳಲ್ಲಿ ಶಾಸನಗಳೆಲ್ಲವೂ ಪ್ರತ್ಯಕ್ಷವಾಗಿ ಪ್ರಜಾಭಿಮತದಿಂದ ಆಗುತ್ತಿದ್ದವೆಂದು ಹೇಳಲು ನಮಗೆ ಯಾವ ಆಧಾರಗಳೂ ಇಲ್ಲ. ಆದರೆ ಆಗಿನ ಶಾಸನಗಳು ದೊರೆಯೊಬ್ಬನ ಸ್ವೇಚ್ಛೆಯಂತೆ ನಡೆಯುತ್ತಿರಲಿಲ್ಲವೆಂಬುದು ಸ್ಮೃತಿಶಾಸ್ತ್ರಗಳಿಂದ ಸ್ಪಷ್ಟವಾಗಿದೆ. ಆ ಕಾಲದ ಶಾಸನಗಳು ಪ್ರಾಯಶಃ ಮನು ಯಾಜ್ಞವಲ್ಕ್ಯ ಪರಾಶರಾದಿ ಮಹರ್ಷಿಗಳಿಂದ ವಿರಚಿತಗಳಾದ ಧರ್ಮಶಾಸ್ತ್ರಗಳಲ್ಲಿಯೂ ಶಿಷ್ಟಸಂಪ್ರದಾಯಗಳಲ್ಲಿಯೂ ಅಡಕವಾಗಿದ್ದುವು. ರಾಜನು ಎಲ್ಲ ವಿಷಯಗಳಲ್ಲಿಯೂ ಧರ್ಮಕ್ಕೆ ಅಧೀನನಾಗಿದ್ದನು. ಅವನು ಆಗಾಗ ಹೊಸಹೊಸ ಸಂದರ್ಭಗಳಿಗೆ ತಕ್ಕಂತೆ ಮಾಡಿದ ಹೊಸ ಶಾಸನ ಹೊಸ ಪರಿಷ್ಕಾರಗಳೆಲ್ಲವೂ ಹಳೆಯ ಧರ್ಮಸಂಪ್ರದಾಯಗಳಿಗೆ ವಿರೋಧವಾಗದೆ ಅನುಸಾರವಾಗಿಯೇ ಇರುತ್ತಿದ್ದವು. ಧರ್ಮವು ಸಮಾಜದಿಂದ ಪುರಸ್ಕೃತರಾದ ವಿದ್ವಜ್ಜನರ ಉಪದೇಶದಿಂದ ತಿಳಿಯಬರುತ್ತಿತ್ತು. ಈ ರೀತಿ ನೋಡಿದರೆ, ಆ ಕಾಲದಲ್ಲಿ ಈಗಿನ ಪಾರ್ಲಿಮೆಂಟುಗಳಂಥ ಪ್ರಜಾಪ್ರತಿನಿಧಿ ಸಭೆಗಳಿರದಿದ್ದರೂ,—ಆಗ ಪ್ರಜಾಪ್ರಮುಖರೇ ಸೇರಿ ಈಗಿನಂತೆ ಬಹುಮತದಿಂದ ಕಾನೂನು ಕಾಯಿದೆಗಳನ್ನು ನಿಶ್ಚಯಮಾಡುವ ಪದ್ಧತಿಯಿರದಿದ್ದರೂ,—ಎಲ್ಲ ಶಾಸನಗಳೂ

ವಸ್ತುತಃ ಮಹಾಜನಾಭಿಪ್ರಾಯಕ್ಕೆ ಅನುಸಾರವಾಗಿಯೇ ಇರುತ್ತಿದ್ದವೆಂದು ನಾವು ಹೇಳಬಹುದು. ಮನುಷ್ಯರು ಆಗಲೂ ಈಗಿನಂತೆಯೇ ಸೌಖ್ಯಾಭಿಲಾಷಿಗಳಾಗಿಯೂ ಸ್ನೇಹ ಮೋಹ ಕೋಪತಾಪಗಳುಳ್ಳವರಾಗಿಯೂ ಇದ್ದರು. ಆದದ್ದರಿಂದ ಆಗಲೂ ಈಗಿನಂತೆಯೇ ಮಹಾಜನಾಭಿಪ್ರಾಯವೆಂಬುದು ಇದ್ದಿರಲೇಬೇಕು. ಆದರೆ ಮಹಾಜನಾಭಿಪ್ರಾಯವನ್ನು ಗೊತ್ತು ಮಾಡಲು ಈಗಿರುವ ಏರ್ಪಾಟುಗಳು ಮಾತ್ರ ಆಗ ಇನ್ನೂ ಸ್ಥಾಯಿಯಾಗಿರಲಿಲ್ಲ. ವಿಶೇಷ ಸಂದರ್ಭಗಳಲ್ಲೆಲ್ಲಾ (ಮೇಲಿನ ಶ್ರೀಮದ್ರಾಮಾಯಣ ಸಂದರ್ಭದಲ್ಲಾದಂತೆ) ಮಹಾಸಭೆಗಳು ನಡೆದು, ಜನಘೋಷದಿಂದ ಮಹಾಜನರ ಅಭಿಪ್ರಾಯವು ವ್ಯಕ್ತವಾಗುತ್ತಿದ್ದಿತೆಂದು ನಾವು ಭಾವಿಸುವುದು ಸಾಹಸವಾಗಲಾರದು. ಈ ತತ್ತ್ವವನ್ನು ನಾವು ಲಕ್ಷ್ಯದಲ್ಲಿಟ್ಟರೆ, ಸಕಲ ಶಾಸನರಚನಾಧಿಕಾರವೂ ಪ್ರಜಾವಿಸಿಯುಕ್ತವಾಗಿರಬೇಕೆಂಬ ಈಗಿನ ಪಾಶ್ಚಾತ್ಯಮತವು ನಮಗೇನೂ ವಿಚಿತ್ರವಾದದ್ದಾಗಿಯೂ ನವೀನವಾದದ್ದಾಗಿಯೂ ಕಾಣುವುದಿಲ್ಲ. ಹೀಗೆ ಪೌರಸ್ತ್ಯ ಪಾಶ್ಚಾತ್ಯ ದೇಶಗಳೆರಡರಲ್ಲಿಯೂ ಮನ್ನಣೆ ಪಡೆದಿರುವ ಈ ತತ್ತ್ವವು ಈಗ ಇಂಡಿಯದ ರಾಜ್ಯವ್ಯವಸ್ಥೆಯಲ್ಲಿಯೂ, ಮೈಸೂರು ಸಂಸ್ಥಾನದ ರಾಜ್ಯ ವ್ಯವಸ್ಥೆಯಲ್ಲಿಯೂ ಅಂಗೀಕೃತವಾಗಿದೆ.

## ಶಾಸನದಲ್ಲಿಯ ಅಂಶಗಳು—ಸ್ವತ್ವ, ಕರ್ತವ್ಯ ಇತ್ಯಾದಿಗಳು

ಶಾಸನಪಾರಮ್ಯವೇ (ಸುಪ್ರಮೆಸಿ-ಆಫ್-ಲಾ)—ಎಂದರೆ ಕಾನೂನುಗಳು ಎಲ್ಲರಿಗಿಂತ ಮೇಲ್ಪಟ್ಟಿರುವುದೇ—ಒಳ್ಳೆಯ ರಾಜ್ಯದ ಮುಖ್ಯಲಕ್ಷಣವೆಂದು ಪಾಶ್ಚಾತ್ಯರು ತಿಳಿದಿದ್ದಾರೆ. ಈ ಹೇಳಿಕೆಯು ಎಲ್ಲರೂ ಧರ್ಮಕ್ಕೆ ಅಧೀನರೆಂಬ ನಮ್ಮ

ಪೂರ್ವಿಕರ ಮತದಲ್ಲಿ ಅಂತರ್ಗತವಾಗಿಯೇ ಇದೆ. ರಾಜ್ಯವೆಂಬ ನಾವದಲ್ಲಿ ಅಧಿಕಾರ, ವಿಧೇಯತೆ—ಎಂಬ ಎರಡು ಅಂಶಗಳಿವೆ ಯೆಂದು ಹಿಂದೆ ನೋಡಿದ್ದೇವಲ್ಲವೆ? ಅದರಲ್ಲಿ ಅಧಿಕಾರ ನಡೆಯಿಸ ಕ್ಕವರು ಯಾವ ಯಾವ ಸಂದರ್ಭಗಳಲ್ಲಿ, ಎಷ್ಟೆಷ್ಟು ಮಾತ್ರ, ಯಾವ ಯಾವ ರೀತಿಯಲ್ಲಿ, ಅಧಿಕಾರವನ್ನು ಪ್ರಯೋಗಿಸ ಹುದು; ಮತ್ತು ವಿಧೇಯರಾಗಿರಬೇಕಾದವರು ಯಾವ ಯಾವ ಸಂದರ್ಭಗಳಲ್ಲಿ, ಎಷ್ಟೆಷ್ಟು ಮಟ್ಟಿಗೆ, ಯಾವ ಯಾವ ರೀತಿಯಲ್ಲಿ ಧೇಯತೆಯನ್ನು ತೋರಿಸಬೇಕು—ಎಂಬುದರ ನಿಷ್ಕರ್ಷೆಯೇ ಶಾಸನ. ಈ ನಿಷ್ಕರ್ಷೆಯಿಲ್ಲದಿದ್ದರೆ ಅಧಿಕಾರಿಗಳು ತಮ್ಮ ಬಲವನ್ನು ಮನಸ್ವೀ ಉಪಯೋಗಪಡಿಸಲು ಯತ್ನಿಸಬಹುದು. ಪ್ರಜೆಗಳು ತಮ್ಮಿಷ್ಟದಂತೆ ನಡೆದುಕೊಂಡು, ರಾಜ್ಯಕ್ಕೆ ತಮ್ಮಿಂದ ಸಲ್ಲಬೇಕಾ ದದ್ದನ್ನು ಸಲ್ಲಿಸದೆ ಹೋಗಬಹುದು. ಈ ಎರಡು ಪಕ್ಷಗಳನ್ನೂ ಹದ್ದಿನಲ್ಲಿಟ್ಟು ಇಬ್ಬರಿಗೂ ಕ್ಷೇಮವನ್ನುಂಟುಮಾಡತಕ್ಕದ್ದು ಶಾಸನ. ಇದಲ್ಲದೆ, ಶಾಸನವಿಲ್ಲದಿದ್ದಲ್ಲಿ ಅಧಿಕಾರಿಗಳು ಪ್ರಜಾ ವರ್ಗದಲ್ಲಿ ಕೆಲವರನ್ನೊಂದು ರೀತಿಯಲ್ಲಿಯೂ ಇನ್ನು ಕೆಲವರನ್ನು ಇನ್ನೊಂದು ರೀತಿಯಲ್ಲಿಯೂ ಕಾಣಲು ಅವಕಾಶವುಂಟಾ ಗುತ್ತದೆ. ಶಾಸನವಿದ್ದೆಡೆಯಲ್ಲಿ ಎಲ್ಲರೂ ಅದಕ್ಕೆ ಅಧೀನರಾದದ್ದ ರಿಂದ ಎಲ್ಲರ ವಿಷಯದಲ್ಲಿಯೂ ಅದು ಒಂದೇ ರೀತಿಯಾಗಿ ಅನ್ವಯಿಸಬೇಕು. ಶಾಸನಕ್ಕೆ ಬಡವನು, ಹಣವಂತನು; ದಡ್ಡ, ಜಾಣ; ಬಿಳಿಯವನು, ಕರಿಯವನು—ಎಂಬಿವೇ ಮೊದಲಾದ ಭೇದಗಳಾವುವೂ ಇಲ್ಲ. ಹೀಗೆ ಶಾಸನದ ಮೂಲಕ ಉಂಟಾಗುವ ಸರ್ವಸಮತೆಯೇ ನ್ಯಾಯವೆನಿಸುತ್ತದೆ.

ಶಾಸನಗಳು ವೈಯಕ್ತಿಕಗಳೆಂದೂ ಸಾರ್ವಜನಿಕಗಳೆಂದೂ ಎರಡು ವಿಧವಾಗಿರುತ್ತದೆ. ಶಾಸನವೆಂಬುದರಲ್ಲಿ ಅಧಿಕಾರ, ವಿಧೇಯತೆಗಳೆರಡರ ಪರಸ್ಪರ ಪರಿಮಿತಿಗಳು ನಿಷ್ಕರ್ಷೆಮಾಡ ಲ್ಪಟ್ಟಿರುತ್ತವಲ್ಲವೆ? ಅದರೊಳಗಿನ ಅಧಿಕಾರಕ್ಕೆ "ಹಕ್ಕು" "ಪ್ರಾಪ್ತವ್ಯ", "ಸ್ವತ್ವ" "ಸೊತ್ತು" (ಇಂಗ್ಲಿಷಿನಲ್ಲಿ "ರೈಟ್")

ಎಂಬ ಹೆಸರುಗಳು ಬಳಕೆಯಲ್ಲಿವೆ. ಒಬ್ಬ ಮನುಷ್ಯನು (ಅಥವಾ ವ್ಯಕ್ತಿಯು) ಯಾವ ಶಕ್ತಿಯನ್ನು, ಅಥವಾ ಅಧಿಕಾರವನ್ನು, ಅಥವಾ ಸ್ವಾತಂತ್ರ್ಯವನ್ನು ಪಡೆದುಕೊಂಡಿರುವುದರಿಂದ, ಅವನು ರಾಜ್ಯದ,—ಎಂದರೆ ರಾಜ್ಯಾಧಿಕಾರಿಗಳ,—ಅನುಮೋದನೆ ಸಹಾಯಗಳ ಮೂಲಕ ಮತ್ತೊಬ್ಬ ಮನುಷ್ಯನ (ಅಥವಾ ವ್ಯಕ್ತಿಯ) ಚರ್ಯೆಗಳ ವಿಷಯದಲ್ಲಿ ನಿರ್ಬಂಧಮಾಡಿಸಲಾಗುವುದೋ ಆ ಶಕ್ತಿಯೇ, ಅಥವಾ ಅಧಿಕಾರವೇ, ಅವನ ಹಕ್ಕು ಅಥವಾ ಸ್ವತ್ವ. ಒಬ್ಬನಲ್ಲಿರುವ ಇಂತಹ ಸ್ವತ್ವವು ಸಿದ್ಧಿಸುವುದಕ್ಕೆ ಇತರರು ಯಾವ ನಡೆವಳಿಕೆಗಳನ್ನು ನಡೆಯಬೇಕೋ,—ಅಥವಾ ಆ ಒಬ್ಬನು ರಾಜ್ಯಶಕ್ತಿಯ ಸಹಾಯದಿಂದ ಇತರರು ಯಾವ ನಡೆವಳಿಕೆಗಳನ್ನಾದರೂ ನಡಸುವಂತೆಯಾಗಲಿ ಅಥವಾ ಬಿಡುವಂತೆಯಾಗಲಿ, ಹಾಗೆ ಮಾಡದಿದ್ದಲ್ಲಿ ದಂಡವನ್ನು ತೆರುವಂತೆಯಾಗಲಿ ಅವರನ್ನು ನಿರ್ಬಂಧಪಡಿಸಲು ಆಗುವುದೋ—ಅಂಥ ಆ ಇತರರ ವಿಧೇಯತೆಗೆ ಅವರ "ಬದ್ಧತೆ" ಅಥವಾ "ಕರ್ತವ್ಯ" ಎಂದು ಹೆಸರು. ಹೀಗೆ ಸ್ವತ್ವ (ರೈಟ್)ಗಳನ್ನೂ ಕರ್ತವ್ಯ (ಡ್ಯೂಟಿ) ಗಳನ್ನೂ ನಿಷ್ಕರ್ಷಿಸುವುದೇ ಶಾಸನದ ಉದ್ದೇಶ. ಇಂಥ ಸ್ವತ್ವ ಕರ್ತವ್ಯಗಳನ್ನು ರಾಜ್ಯದ ಒಬ್ಬ ಪ್ರಜೆಯು ಮತ್ತೊಬ್ಬ ಪ್ರಜೆಯಿಂದ ಸಾಧಿಸಲಾಗುವಂತೆ ಮಾಡುವ ಶಾಸನವು ವೈಯಕ್ತಿಕವಾದುದು—ಎಂದರೆ ವ್ಯಕ್ತಿಗಳಿಗೆ ಸಂಬಂಧಪಟ್ಟುದು. ಇದನ್ನು ಇಂಗ್ಲಿಷಿನಲ್ಲಿ "ಪ್ರೈವೆಟ್ ಲಾ" ಎಂದು ಹೇಳುತ್ತಾರೆ. ಇದನ್ನು ವೈಯಕ್ತಿಕ ಅಥವಾ ವ್ಯಷ್ಟ್ಯರ್ಥಕ ಶಾಸನವೆಂದು ಕರೆಯಬಹುದು. ವ್ಯಷ್ಟಿಯೆಂದರೆ ಒಂದು ಸಮುದಾಯದಲ್ಲಿರುವ ಪ್ರತಿಯೊಬ್ಬ ಮನುಷ್ಯನ ಪ್ರತ್ಯೇಕಭಾವ.

ಈ ಪ್ರತ್ಯೇಕಭಾವವನ್ನು ಮರೆತು ಸಮುದಾಯವೆಲ್ಲವನ್ನೂ ಒಂದೇ ಎಂದು ಭಾವಿಸಿದರೆ ಅದಕ್ಕೆ ಸಮಷ್ಟಿಯೆಂದು ಹೆಸರು. ರಾಜ್ಯವು ಸಮಷ್ಟಿತ್ವದಲ್ಲಿ ಸ್ವತ್ವಗಳನ್ನೂ ಕರ್ತವ್ಯಗಳನ್ನೂ ಪಡೆದುಕೊಂಡಿರುತ್ತದೆ. ಸರ್ಕಾರವು ತೆರಿಗೆ ಸುಂಕ

ಗಳನ್ನು ವಸೂಲುಮಾಡುವುದರಲ್ಲಿಯೂ, ದಂಡಗಳನ್ನು ವಿಧಿಸುವುದರಲ್ಲಿಯೂ, ಭೂಮಿಕೋಶ ಮೊದಲಾದ ಆಸ್ತಿಗಳನ್ನಿಟ್ಟುಕೊಂಡಿರುವುದರಲ್ಲಿಯೂ ತನ್ನ ಸ್ವತ್ವಗಳನ್ನು ಸಾಧಿಸಿಕೊಳ್ಳುತ್ತದೆ. ಅದು ತನಗೆ ಬೇಕಾದ ಕೆಲಸಗಳನ್ನೂ ಸರಬರಾಯಿಗಳನ್ನೂ ಇತರರಿಂದ ಮಾಡಿಸಿಕೊಳ್ಳುವುದರಿಂದಲೂ, ಸಾಲ ತೆಗೆಯುವುದರಿಂದಲೂ, ಅದರ ಅಧಿಕಾರಿಗಳು ಮಾಡಬಹುದಾದ ಕಾರ್ಯಾಕಾರ್ಯಗಳ ಕಾರಣದಿಂದಲೂ ಕರ್ತವ್ಯವುಳ್ಳದ್ದೂ ಆಗುತ್ತದೆ. ಯಾವ ಶಾಸನದಿಂದ ರಾಜ್ಯಕ್ಕೆ ಪ್ರಜೆಯ ವಿಷಯದಲ್ಲಿ ಇಂಥ ಸ್ವತ್ತು ಕರ್ತವ್ಯಗಳುಂಟಾಗುತ್ತವೆಯೋ, ಅಥವಾ ಪ್ರಜೆಗೆ ರಾಜ್ಯವಿಷಯದಲ್ಲಿ ಸ್ವತ್ತು ಕರ್ತವ್ಯಗಳುಂಟಾಗುತ್ತವೆಯೋ, ಅದಕ್ಕೆ ಸಾರ್ವಜನಿಕ ಅಥವಾ ಸಮಷ್ಟ್ಯರ್ಥಕ ಶಾಸನವೆಂಬ ಹೆಸರನ್ನಿಡಬಹುದು. ಇದನ್ನು ಇಂಗ್ಲಿಷಿನಲ್ಲಿ "ಪಬ್ಲಿಕ್ ಲಾ" ಎಂದು ಕರೆಯುತ್ತಾರೆ.

## ರಾಜ್ಯಾದಾಯವೂ ಶಾಸನಕ್ಕೆ ಸೇರಿದ್ದು

ವ್ಯಷ್ಟಿ ಶಾಸನ ಸಮಷ್ಟಿ ಶಾಸನಗಳೆರಡರಲ್ಲಿಯೂ ಸ್ವತ್ವಾಧಿಕಾರ (ಸಿವಿಲ್) ಅಪರಾಧಪ್ರತೀಕಾರ (ಕ್ರಿಮಿನಲ್)ಗಳೆಂಬ ಎರಡು ವಿಷಯಗಳೂ ಇರುತ್ತವೆ. ಇವುಗಳಲ್ಲಿ ಸಮಷ್ಟಿಶಾಸನದ ಸ್ವತ್ವಾಧಿಕಾರಭಾಗದಲ್ಲಿ, ರಾಜ್ಯದ ವ್ಯಯಕ್ಕೆ ಬೇಕಾದ ಧನವನ್ನೂ ದಗಿಸುವ ತೆರಿಗೆ ಸುಂಕಗಳಿಗೆ ಸಂಬಂಧಪಟ್ಟ ಶಾಸನಗಳೂ ಸೇರುತ್ತವೆ. ತೆರಿಗೆ ಸುಂಕಗಳಿಂದ ರಾಜ್ಯದ ಬೊಕ್ಕಸವು ತುಂಬದಿದ್ದರೆ ಬಗೆಬಗೆಯ ರಾಜ್ಯಕಾರ್ಯಗಳು ನಡೆಯಲಾರವು. ತೆರಿಗೆ ಕಂದಾಯಗಳನ್ನು ಶಾಸನದಿಂದ ನಿಷ್ಕರ್ಷೆಮಾಡದಿದ್ದರೆ, ಮೇಲೆ ಸೂಚಿಸಿದಂತೆ, ಅವುಗಳ ಹಂಚಿಕೆಯಲ್ಲಿ ಅಸಮತೆ ಅನ್ಯಾಯಗಳಿಗೆ ಅವಕಾಶವುಂಟಾಗುವುದು. ಆದಕಾರಣ ರಾಜ್ಯಾದಾಯಕ್ಕೆ ಸಂಬಂಧಪಟ್ಟ ಎಲ್ಲ ವಿಧಿಗಳೂ ಶಾಸನವೆಂದೇ ಎನ್ನಿಸಿಕೊಳ್ಳುತ್ತವೆ. ಇತರ ವಿಧದ ಶಾಸನವು ಹೇಗೆ ಪ್ರಜಾಸಮ್ಮತವಾದ

ದ್ದಾಗಿರಬೇಕೋ ಈ ಕೋಶಸಂಬಂಧಿಯಾದ ಶಾಸನವೂ ಹಾಗೆಯೇ, ಅದೇ ಕಾರಣಗಳಿಗಾಗಿಯೇ, ಪ್ರಜಾಸಮ್ಮತವಾದ ದ್ದಾಗಿರಬೇಕು. ಕೋಶವೆಂದರೆ ರಾಜ್ಯದ ಬೊಕ್ಕಸ, ಭಂಡಾರ, "ಟ್ರೆಜರಿ."

ಶಾಸನಕಾರರಿಂದ ರಾಜ್ಯಾದಾಯಕ್ಕಾಗಿ ವಿಧಿಸಲ್ಪಡ ಬೇಕಾದ ಸುಂಕ ತೆರಿಗೆಗಳು ರಾಜ್ಯವು ಮಾಡಬೇಕಾದ ವ್ಯಯಕ್ಕೆ ತಕ್ಕಂತೆ ಇರಬೇಕಾದ ಕಾರಣ, ವ್ಯಯವಿಚಾರಗಳೂ ಪ್ರಜಾ ಪಕ್ಷದ ಅನುಮತಿಗೆ ಒಳಪಟ್ಟಿರಬೇಕೆಂಬುದು ಮೇಲಿನ ಕಾರಣ ಗಳಿಂದಲೇ ಸಿದ್ಧವಾಗುತ್ತದೆ. ರಾಜ್ಯವ್ಯಯವಾದರೋ ರಾಜ್ಯವು ಕೈಕೊಳ್ಳಬೇಕಾದ ಕಾರ್ಯಗಳಿಗೆ ತಕ್ಕಂತೆ ಇರುವುದೆಂಬುದು ಸ್ವತಃ ಸಿದ್ಧವಾಗಿದೆ. ಆದದ್ದರಿಂದ ರಾಜ್ಯಾಧಿಕಾರಿಗಳು ಮಾಡುವ ಕಾರ್ಯಗಳ ವಿವರವೂ ಪ್ರಜಾಪಕ್ಷದವರ ವಿಚಾರಣೆಗೆ ಬರಲೇ ಬೇಕಾಗುತ್ತದೆ. ಈ ರೀತಿಯಾಗಿ, ಅಧಿಕಾರಿಗಳು ರಾಜ್ಯ ಕೋಶದ ಸಹಾಯದಿಂದ ನಡಸುವ ಕೆಲಸಗಳಿಗೂ, ಆ ರಾಜ್ಯ ಕೋಶಕ್ಕೆ ಹಣವನ್ನೊದಗಿಸತಕ್ಕ ಶಾಸನಗಳನ್ನು ಮಾಡುವ ಪ್ರಜಾಪ್ರತಿನಿಧಿ ಸಂಸ್ಥೆಗೂ ಅನ್ಯೋನ್ಯ ಸಂಬಂಧವಿರುವುದು ಸಹಜವಾಗಿದೆ. ಈ ಸಂಸ್ಥೆಯು ಶಾಸನ ಮಾಡಿದಲ್ಲದೆ ಅಧಿಕಾರಿ ಗಳಿಗೆ ಸುಂಕ ತೆರಿಗೆಗಳನ್ನು ತೆಗೆಯುವ ಅಧಿಕಾರವಿಲ್ಲ; ಅವರಿಗೆ ಆ ಅಧಿಕಾರವಿಲ್ಲದೆ ರಾಜ್ಯಕೋಶವು ತುಂಬುವ ಬಗೆಯಿಲ್ಲ; ರಾಜ್ಯಕೋಶವು ತುಂಬಿದಲ್ಲದೆ ಅವರ ಕಾರ್ಯಗಳು ನಡೆಯುವ ಪರಿಯಿಲ್ಲ; ಅವರ ಕಾರ್ಯಕಲಾಪದ ವಿವರವನ್ನು ತಿಳಿದು ಒಪ್ಪಿದಲ್ಲದೆ ಶಾಸನ ಸಂಸ್ಥೆಯು ಅವರ ಸಹಾಯಕ್ಕಾಗಿ ಶಾಸನ ಮಾಡುವಂತಿಲ್ಲ. ಹೀಗೆ ರಾಜ್ಯಾಧಿಕಾರಿಗಳು ನಡಸುವ ನಾನಾ ಕಾರ್ಯಭಾಗಗಳು ಪ್ರಜಾಪ್ರತಿನಿಧಿಗಳನ್ನೊಳಗೊಂಡ ಶಾಸನ ಸಂಸ್ಥೆಯ ಸಮಾಲೋಚನೆಗೂ ವಿಚಾರಣೆಗೂ ಅರ್ಹಗಳಾಗು ತ್ತವೆ.

---

# ೧೦. ರಾಜ್ಯಯಂತ್ರದ ರಚನೆ

## ಭಾಗ ೨

## ಕಾರ್ಯನಿರ್ವಾಹ—"ಎಕ್ಸೆಕ್ಯುಟಿವ್"

ರಾಜ್ಯಕ್ಕೆ ಶಾಸನ ಸಂಸ್ಥೆಯು ಅಂತರಂಗದಂತಾದರೆ ಕಾರ್ಯನಿರ್ವಾಹ ಸಂಸ್ಥೆಯು, ಎಂದರೆ ಅಧಿಕಾರಿವರ್ಗವು, ಬಹಿರಂಗದಂತಿರುತ್ತದೆ. ಅಧಿಕಾರಿಗಳಿಲ್ಲದೆ ಯಾವ ಕೆಲಸವೂ ನಡೆಯದು. ಪ್ರಜಾಭಿಪ್ರಾಯವನ್ನು ಶಾಸನ ಸಂಸ್ಥೆಯು ಮಾತುಗಳಿಂದ ತಿಳಿಸಬಹುದು ; ಆ ಅಭಿಪ್ರಾಯವನ್ನು ಕಾರ್ಯರೂಪಕ್ಕೆ ತರಲು ಅದರಿಂದ ಆಗದು. ಏಕೆಂದರೆ :

(೧) ಆ ಸಂಸ್ಥೆಯು ಅನೇಕ ಮಂದಿಯುಳ್ಳದ್ದು ; ಅವರೆಲ್ಲರೂ ಸಮಾನಸ್ಕಂಧರು ; ಅವರಲ್ಲಿ ಅಧಿನಾಯಕನೊಬ್ಬನು, ಆತನ ಕೈಯಕೆಳಗಿನವನೊಬ್ಬನು, ಅವನ ಕೆಳಗೆ ಮತ್ತೊಬ್ಬನು—ಎಂಬ ತಾರತಮ್ಯಭಾವವಿಲ್ಲ ; ಈ ತಾರತಮ್ಯವಿಲ್ಲದ ಕಡೆ ಅಧಿಕಾರ ನಡೆಯದು. ವಿಧೇಯರಾದವರಿಲ್ಲದ ಕಡೆ ಅಧಿಕಾರವೆಂಬುದಿರಲಾರದೆಂದು ಹಿಂದೆಯೇ ನೋಡಿದ್ದೇವೆ. ಶಾಸನ ಸಂಸ್ಥೆಯ ಸದಸ್ಯರು (ಮೆಂಬರು)ಗಳೆಲ್ಲರೂ ಸಮಾನರಾದ ಕಾರಣ, ಅವರಲ್ಲಿ ಒಬ್ಬರು ಹೇಳಿದಂತೆ ಮತ್ತೊಬ್ಬರು ನಡೆಯುವುದೆಂಬ ಅಧಿಕಾರ ಸಂಬಂಧವು ಸಾಧ್ಯವಲ್ಲ ; ಆದಕಾರಣ ಅವರು ಕೆಲಸದ ವಿಧಾನವನ್ನು ತಿಳುಹಿಸಬಲ್ಲರೇ ಹೊರತು ಕೆಲಸವನ್ನು ನಡಸಲಾರರು.

(೨) ಕಾರ್ಯದ ನೀತಿಯನ್ನು ಗೊತ್ತುಮಾಡಿ ಹೇಳಲು ಬೇಕಾದ ಜ್ಞಾನಾನುಭವಗಳೇ ಬೇರೆ ; ಕಾರ್ಯವನ್ನು ರೂಪಗೊಳಿಸಲು ಬೇಕಾದ ಜ್ಞಾನಾನುಭವಗಳೇ ಬೇರೆ. ಒಂದು ಒಡವೆಯನ್ನು ಮಾಡಿಸಬೇಕಾದಾಗ ಆ ಒಡವೆಯ ಮಾಟ ಹೇಗಿರಬೇಕು ; ಅದರಲ್ಲಿ ಎಂತಹ ಚಿತ್ರವನ್ನು ಕೆತ್ತಿರಬೇಕು ; ಯಾವಯಾವ

ರತ್ನಗಳನ್ನು ಎಲ್ಲೆಲ್ಲಿರಿಸಬೇಕು—ಎಂದು ಸೂಚಿಸಲು ಅನೇಕಾಭರಣಗಳನ್ನು ನೋಡಿದ ಅನುಭವವುಳ್ಳ ಹೆಂಗಸು ಶಕ್ತಳಾಗಿರುತ್ತಾಳೆ; ಆದರೆ ಅಂಥ ಒಡವೆಯನ್ನು ಮಾಡುವುದಕ್ಕೆ ಬೇಕಾದ ಶಕ್ತಿ ಆಕೆಗಿರುವುದಿಲ್ಲ; ಅದಿರುವುದು ಅಕ್ಕಸಾಲಿಗನಲ್ಲಿ. ಅದೇ ರೀತಿಯಾಗಿ, ಪ್ರಜೆಗಳ ಸೌಕರ್ಯಾಸೌಕರ್ಯಗಳನ್ನು ವಿವರಿಸಿ, ಕಾನೂನುಗಳೂ ಕಟ್ಟುಪಾಡುಗಳೂ ಕೆಲಸಗಳೂ ಹೇಗೆ ಹೇಗೆ ಆಗಬೇಕೆಂದು ತಿಳುಹಿಸಲು ಪ್ರಜಾಪ್ರತಿನಿಧಿಗಳು ಶಕ್ತರಾಗಬಹುದು; ಆದರೆ ಆ ಕಾನೂನುಗಳನ್ನು ಜಾರಿಗೆ ತಂದು, ಆ ಕಟ್ಟುಪಾಡುಗಳನ್ನು ಜನರಲ್ಲಿ ನಿಲ್ಲಿಸಿ, ಆ ಕೆಲಸಗಳನ್ನು ಆಗಮಾಡಿಸಲು ಬೇಕಾದ ವಿಶೇಷಜ್ಞಾನವು ಅವರಿಗೆ ಸಾಧಾರಣವಾಗಿರುವುದಿಲ್ಲ. ಆ ವಿಶೇಷಜ್ಞಾನಾನುಭವಗಳನ್ನು ಸಂಪಾದಿಸಿರುವವರು ರಾಜ್ಯಸೇವೆಯನ್ನೇ ತಮ್ಮ ಜೀವನವೃತ್ತಿಯನ್ನಾಗಿಟ್ಟುಕೊಂಡಿರುವ ಕಾರುಬಾರಿಗಳು. ಲಾಯರು ಕೆಲಸ, ಉಪಾಧ್ಯಾಯತನ, ಎಂಜಿನಿಯರ್ ಕೆಲಸ ಇವು ಹೇಗೆ ಈಗ ಸ್ವತಂತ್ರ ಕಸಬುಗಳೆಂದು ಎಣಿಸಲ್ಪಟ್ಟಿವೆಯೋ, ರಾಜ್ಯದ ಆಡಳಿತಗಳನ್ನು ನಡಸುವ ಕೆಲಸವೂ ಹಾಗೆಯೇ ಈ ಕಾಲದಲ್ಲಿ ಒಂದು ಪ್ರತ್ಯೇಕ ಕಸಬೆಂದು ಭಾವಿಸಲ್ಪಟ್ಟಿದೆ. ರೈಲುಗಾಡಿಯ ಯಂತ್ರವನ್ನಾಗಲಿ, ಮೋಟಾರು ಯಂತ್ರವನ್ನಾಗಲಿ, ಹೊಲಿಗೆಯ ಯಂತ್ರವನ್ನಾದರೂ ಆಗಲಿ ನಡಸುವವನೇ ಆಯಾ ಕಲೆಗಳನ್ನು ಬಹುದಿವಸಗಳ ಅಭ್ಯಾಸದಿಂದ ಕಲಿಯಬೇಕಾಗಿರುವಾಗ, ಅಸ್ವತಂತ್ರ ವಸ್ತುಗಳಿಂದ ನಿರ್ಮಿತವಾದ ಈ ಯಂತ್ರಗಳಂತಲ್ಲದೆ ಸ್ವತಂತ್ರರಾದ ಮನುಷ್ಯರೆಂಬ ವಸ್ತುವಿನಿಂದ ನಿರ್ಮಿತವಾದ ಕಛೇರಿಯೆಂಬ ಯಂತ್ರವನ್ನು ನಡಸುವವನಿಗೆ ಎಷ್ಟು ಅಭ್ಯಾಸವೂ ಪರಿಶ್ರಮವೂ ಆಗಿರಬೇಕು! ಕಛೇರಿಯು ಹೇಗೆ ಕೆಲಸಮಾಡಬೇಕೆಂಬುದನ್ನು ಕುರಿತು ಉಪನ್ಯಾಸಮಾಡುವವನಿಗೆ ಇರಬೇಕಾದ ಯೋಗ್ಯತೆಯೇ ಬೇರೆ; ಹತ್ತುಮಂದಿಯನ್ನು ಕೈಯಕೆಳಗಿಟ್ಟುಕೊಂಡು, ಅವರಲ್ಲಿ ಬೇಕಾದ ಉತ್ಸಾಹವನ್ನೂ ಸಹಕಾರವನ್ನೂ ಹುಟ್ಟಿಸಿ,

ಅವರಿಂದ ಒಂದು ಕೆಲಸವನ್ನು ತೃಪ್ತಿಕರವಾಗಿ ಮಾಡಿಸಲು ಬೇಕಾದ ಯೋಗ್ಯತೆಯೇ ಬೇರೆ. ಇದರಲ್ಲಿ ಮೊದಲನೆಯ ತೆರದ ಯೋಗ್ಯತೆಯನ್ನು ಪಡೆದಿರುವವರು ಶಾಸನಸಂಸ್ಥೆಯಲ್ಲಿರ ಬಹುದು; ಆದರೆ ಕಾರ್ಯನಿರ್ವಾಹಕ ಸಂಸ್ಥೆಗೆ ಬೇಕಾದವರು ಎರಡನೆಯ ತೆರದ ಯೋಗ್ಯತೆಯನ್ನು ಪಡೆದವರು. ರಾಜ್ಯದ ಆಡಳಿತಗಳಿಗೆ ಆವಶ್ಯಕವಾದ ಲೋಕಾನುಭವವನ್ನು ಸಂಪಾದಿಸಿ ಕೊಂಡು, ಕಾರ್ಯಸಾಮಗ್ರಿಗಳ ಸೂಕ್ಷ್ಮವಿವರ (ತಪಶೀಲು) ವನ್ನು ತಿಳಿದುಕೊಂಡು, ಇತರರ ಕೆಲಸವನ್ನು ಪರೀಕ್ಷೆಮಾಡು ವುದರಲ್ಲಿ ದಕ್ಷತೆಯನ್ನೂ ಜಾಗರೂಕತೆಯನ್ನೂ ಅಭ್ಯಾಸಮಾಡಿ ಕೊಂಡು, ಸ್ವಕರ್ತವ್ಯಗಳನ್ನು ನಡಸುವುದರಲ್ಲಿ ತ್ವರೆಯನ್ನೂ ವಿಚಕ್ಷಣೆಯನ್ನೂ ತೋರಿಸಬಲ್ಲವರಾದ ಕಾರುಬಾರಿಗಳೇ ಕಾರ್ಯನಿರ್ವಾಹಸಂಸ್ಥೆಗೆ ತಕ್ಕವರು.

(೩) ಶಾಸನ ಮಾಡತಕ್ಕ ಸಂಸ್ಥೆಯೂ ಶಾಸನಾನುಸಾರ ವಾದ ಕೆಲಸಗಳನ್ನು ನಡಸತಕ್ಕ ಸಂಸ್ಥೆಯೂ ಬೇರೆಬೇರೆಯಾಗಿರ ಬೇಕೆನ್ನುವುದಕ್ಕೆ ಮತ್ತೊಂದು ಪ್ರಬಲವಾದ ಕಾರಣವಿದೆ. ಅದೇನೆಂದರೆ—ಆ ಎರಡು ಸಂಸ್ಥೆಗಳೂ ಪರಸ್ಪರ ಪ್ರಶ್ನೋತ್ತರ ಸ್ಥಾನಗಳಲ್ಲಿರಬೇಕಾದದ್ದು ಅಪೇಕ್ಷಣೀಯ. ಒಬ್ಬರು ಇನ್ನೊಬ್ಬರಿಂದ ಯಾವುದಾದರೊಂದು ಕೆಲಸವನ್ನು ಮಾಡಿಸಿ ಕೊಳ್ಳಬೇಕಾದ ಸಂದರ್ಭದಲ್ಲೆಲ್ಲಾ, ಉಸ್ತುವಾರಿ ಅಥವಾ ಮೇಲ್ವಿಚಾರಣೆಯು ಎಷ್ಟು ಚೆನ್ನಾಗಿದ್ದರೆ ಆ ಕೆಲಸವು ಅಷ್ಟು ಚೆನ್ನಾಗಿ ಆಗುವುದೆಂಬುದು ಎಲ್ಲರಿಗೂ ಅನುಭವದಲ್ಲಿರುವ ಮಾತು. ನಮ್ಮ ಸೇವಕನಾಗಲಿ, ಪ್ರತಿನಿಧಿಯಾಗಲಿ, ಯಾವು ದಾದರೊಂದು ಬಗೆಯ ಪ್ರತಿಫಲಾಪೇಕ್ಷೆಯಿಂದ ನಮಗಾಗಿ ಕೆಲಸಮಾಡುವ ಬೇರೆ ಯಾರೇ ಆಗಲಿ—ಅವನೆಂತಹ ಸಮರ್ಥ ನಾದರೂ—ನಮ್ಮ ಕೆಲಸವು ಅವನಿಂದ ಸರಿಯಾಗಿ ನಡೆಯ ಬೇಕಾದರೆ ಅವನ ಮೇಲೆ ನಮ್ಮ ವಿಚಾರಣೆಯು ಸಂತತವಾಗಿರ ಬೇಕು. ರಾಜ್ಯವಾದರೋ ಒಬ್ಬ ವ್ಯಕ್ತಿಯಂತಲ್ಲ. ಅದು ಬಹು

ಮಂದಿ ವ್ಯಕ್ತಿಗಳನ್ನೊಳಗೊಂಡದ್ದು. ಆದಕಾರಣ ಅದರ ಕಾರ್ಯಗಳ ಮೇಲ್ವಿಚಾರಣೆಯು ನಮ್ಮ ನಮ್ಮ ಸ್ವಂತಕಾರ್ಯಗಳ ಮೇಲ್ವಿಚಾರಣೆಯು ನಡೆಯುವ ರೀತಿಯಲ್ಲಿ ಒಬ್ಬರಿಬ್ಬರಿಂದ ನಡೆಯಲಾರದು. ಆದದ್ದರಿಂದ ಅದರ ಕಾರ್ಯಗಳನ್ನು ನಡಸತಕ್ಕವರಲ್ಲಿಯೇ ಅನೇಕ ಭಾಗಗಳಿದ್ದು ಆ ಭಾಗಗಳಲ್ಲಿ ಒಂದು ಭಾಗವು ಮತ್ತೊಂದು ಭಾಗದ ಕಾರ್ಯವನ್ನು ಪರೀಕ್ಷಿಸಿತಿದ್ದುವಂತೆ ಇರಬೇಕು. ಈ ತೆರದ ಪರೀಕ್ಷಾ ಸೌಕರ್ಯವೇ ರಾಜ್ಯವ್ಯವಸ್ಥೆಯಲ್ಲಿ ಮುಖ್ಯವಾಗಿ ತೋರಿಬರಬೇಕಾದ ಸುಲಕ್ಷಣ. ಮನುಷ್ಯನಲ್ಲಿ ಸ್ವಾಭಾವಿಕವಾಗಿಯೇ ಎಷ್ಟೋ ಅಜ್ಞತೆಯೂ ಅಲ್ಪತೆಯೂ ಇರುತ್ತವೆ. ಆದಕಾರಣ ಅವನ ಕೃತ್ಯಗಳು—ಅವನು ಅವನ್ನು ಎಷ್ಟು ಚೆನ್ನಾಗಿ ಮಾಡಿರುವೆನೆಂದು ನಂಬಿಕೊಂಡಿದ್ದರೂ—ಇತರರ ಗುಣದೋಷ ವಿಮರ್ಶೆಗೆ[12] ಪಾತ್ರಗಳಾದರೆ, ಅವು ಇನ್ನೂ ಉತ್ತಮಗೊಳ್ಳಬಹುದೇ ಹೊರತು ಕೆಡಲಾರವು. ಆದಕಾರಣ ರಾಜ್ಯಯಂತ್ರದ ಒಂದು ಅಂಗವು ಅಥವಾ ಕರಣವು, ಮತ್ತೊಂದು ಕರಣದ ಪರೀಕ್ಷೆಗೆ ಸಿಕ್ಕುವಂತಿದ್ದರೆ, ಆಗ ರಾಜ್ಯಕಾರ್ಯಗಳು ತಪ್ಪದೆ ನಡೆದಾವೆಂಬ ಭರವಸೆಯು ತಕ್ಕಮಟ್ಟಿಗಾದರೂ ಇರುವುದು. ಈ ಕಾರಣದಿಂದ ರಾಜ್ಯದ ಕಾರ್ಯನಿರ್ವಾಹಕ ಸಂಸ್ಥೆಯು ಯಾವಾಗಲೂ ಶಾಸನ ಕಾರಕ ಸಂಸ್ಥೆಗೆ ಉತ್ತರ ಹೇಳತಕ್ಕದ್ದಾಗಿರಬೇಕೆಂದು—ಜವಾಬ್ದಾರೀ ಭಾರ ಹೊತ್ತಿರಬೇಕೆಂದು—ಇಂಗ್ಲೆಂಡು ಮೊದಲಾದ ಪಾಶ್ಚಾತ್ಯ ದೇಶಗಳಲ್ಲಿ ನಿಶ್ಚಯಿಸಿರುತ್ತಾರೆ. ಇಂಥ ಏರ್ಪಾಡಿಗೇ "ಉತ್ತರ ಭಾರವುಳ್ಳ" ರಾಜ್ಯವ್ಯವಸ್ಥೆ (ರೆಸ್ಪಾನ್ಸಿಬಲ್ ಗವರ್ನ್‌ಮೆಂಟ್) ಅಥವಾ ಜವಾ

---

[12] ಕಾಳಿದಾಸ ಕವಿಯು "ಬಲವದಪಿ ಶಿಕ್ಷಿತಾನಾಂ ಆತ್ಮನ್ಯಪ್ರತ್ಯಯಂ ಚೇತಃ" ಎಂಬ ವಾಕ್ಯದಿಂದ ಗುಣದೋಷವಿಮರ್ಶೆಯ ಬೆಲೆಯನ್ನು ಒಪ್ಪಿಕೊಂಡಿದ್ದಾನೆ. ಭರ್ತೃಹರಿಯು "ಲೋಕಾಪವಾದಾದ್ಭಯಂ" ಎಂಬುದನ್ನು ಸತ್ಪುರುಷ ಲಕ್ಷಣಗಳಲ್ಲಿ ಸೇರಿಸಿದ್ದಾನೆ.

ಬ್ಯಾರೀ ಸರ್ಕಾರ ಎಂದು ಹೆಸರು. ಶಾಸನ ಸಂಸ್ಥೆಯು ಎಲ್ಲ ಕೆಲಸಗಳನ್ನೂ ತಾನೇ ನಡಸುವ ಹಾಗಿದ್ದರೆ, ಅಥವಾ ಕಾರ್ಯ ಸಂಸ್ಥೆಯು ಎಲ್ಲ ಶಾಸನಗಳನ್ನೂ ತಾನೇ ಮಾಡಿಕೊಳ್ಳುವ ಹಾಗಿದ್ದರೆ, ಅಂಥಾ ಏರ್ಪಾಡಿನಲ್ಲಿ ಅವುಗಳ ವಿಧಾಯಕ ವಿಧೇಯತಾ ಭಾವಗಳು ಇಲ್ಲದೆ ಹೋಗಿ, ಅವೆರಡಕ್ಕೂ ವ್ಯತ್ಯಾಸವಿಲ್ಲದೆ, ಅವು ಒಂದೇ ಆಗಿ, ಒಂದು ಮತ್ತೊಂದಕ್ಕೆ ಉತ್ತರವಾದಿಯಾಗುವ ಅವಕಾಶವೇ ಇಲ್ಲವಾಗುತ್ತದೆ. ಹೀಗೆ ಜವಾಬ್ದಾರಿಯು ಭಾರವಿಲ್ಲದೆ, ಕೆಲಮಂದಿ ರಾಜ್ಯಾಧಿಕಾರಿಗಳು ತಾವೇ ಶಾಸನಕರ್ತರೂ ಕಾರ್ಯಕರ್ತರೂ ಸಹ ಆಗಿದ್ದರೆ, ಅದಕ್ಕೇ "ಬ್ಯೂರೋಕ್ರಸಿ" ಅಥವಾ "ಭೃತ್ಯಪಾರುಪತ್ಯ" ಎಂಬ ಹೆಸರು ಬರುತ್ತದೆ. ಅದೇ ಕಛೇರಿ ಕಾರುಬಾರು. ಅದು ಸುವ್ಯವಸ್ಥೆಯಲ್ಲ. ಸುವ್ಯವಸ್ಥೆಯಲ್ಲಿ ಅಧಿಕಾರಿವರ್ಗವು ಶಾಸನ ಕಾರಕವಾದ ಪ್ರಜಾಪ್ರತಿನಿಧಿ ಸಂಸ್ಥೆಯ ವಿಷಯದಲ್ಲಿ ಉತ್ತರ ಭಾರವುಳ್ಳದ್ದಾಗಿರಬೇಕು. ಪ್ರಜಾಪ್ರತಿನಿಧಿ ಸಂಸ್ಥೆಯೂ ಸಹ ಅಧಿಕಾರಿವರ್ಗದ ಕಾರ್ಯನಿರ್ವಾಹ ಭಾರವನ್ನು ತಿಳಿದು ಅದಕ್ಕೆ ಎಡೆಕೊಡುವುದಾಗಬೇಕು. ಹೀಗೆ ಎರಡು ಸಂಸ್ಥೆಗಳೂ ಬೇರೆ ಬೇರೆಯಾಗಿ ಕೆಲಸಮಾಡುತ್ತ ಸಹಕರಿಸುವುದಾವಶ್ಯಕ.

# ೧೧. ರಾಜ್ಯಯಂತ್ರದ ರಚನೆ

## ಭಾಗ ೩

## ನ್ಯಾಯನಿರ್ಣಯ ಸಂಸ್ಥೆ—"ಜ್ಯುಡಿಷಿಯರಿ"

ಪ್ರಜಾಪ್ರತಿನಿಧಿ ಸಂಸ್ಥೆಯು ರಚಿಸಿರುವ ಅಥವಾ ಅಂಗೀಕರಿಸಿರುವ, ರಾಜ್ಯಸಂಬಂಧವಾದ ಸಮಷ್ಟಿ ಶಾಸನಗಳನ್ನೇ ಆಗಲಿ, ಅಥವಾ ಪ್ರಜೆಗಳ ಪರಸ್ಪರ ವ್ಯವಹಾರಗಳಿಗೆ ಸಂಬಂಧಪಟ್ಟ ವ್ಯಷ್ಟಿಶಾಸನಗಳನ್ನೇ ಆಗಲಿ, ಕಾರ್ಯನಿರ್ವಾಹಕ ಸಂಸ್ಥೆಯು ಉಪಯೋಗಕ್ಕೆ—ಎಂದರೆ ಚಲಾವಣೆಗೆ ಅಥವಾ

ಜಾರಿಗೆ—ತರುವ ಸಂದರ್ಭಗಳಲ್ಲಿ, ಅಂಥಾ ಉಪಯೋಗಕ್ಕೆ ವಿಷಯನಾದ ಪ್ರಜೆಗೂ ಅಧಿಕಾರಿವರ್ಗಕ್ಕೂ ವಿವಾದಗಳು ಹುಟ್ಟಬಹುದು. ಶಾಸನವಾಕ್ಯಕ್ಕೆ ಅಧಿಕಾರಿವರ್ಗವು ಮಾಡಿರುವ ಅರ್ಥವು ಸರಿಯಾಗಿಲ್ಲವೆಂದು ಪ್ರಜೆಯು ವಾದಿಸಬಹುದು; ಅಥವಾ ಆ ಶಾಸನವು ಅನ್ವಯಿಸುವುದಕ್ಕಿರಬೇಕಾದ ಸಂಗತಿಗಳು ತನ್ನ ವಿಷಯದಲ್ಲಿಲ್ಲವೆಂದು ವಾದಿಸಬಹುದು; ಅಷ್ಟೇ ಅಲ್ಲದೆ ಯಾವುದಾದರೊಂದು ಶಾಸನದ ಮೇರೆಗೆ ಅಧಿಕಾರಿವರ್ಗವು ತನಗೋಸ್ಕರ ಮಾಡಬೇಕಾಗಿದ್ದ ಕರ್ತವ್ಯಗಳನ್ನು ಅದು ಸರಿಯಾಗಿ ನೆರವೇರಿಸಿಲ್ಲವೆಂದು ಅದರ ಮೇಲೆ ದೋಷವನ್ನಾಪಾದನೆಮಾಡಿ, ಅದರಿಂದ ತನಗಾದ ನಷ್ಟಕ್ಕಾಗಿ ಪರಿಹಾರರೂಪವಾದ ಪ್ರತಿಫಲವನ್ನಪೇಕ್ಷಿಸಬಹುದು. ಕಾರ್ಯಾಧಿಕಾರಿವರ್ಗದವರಿಗೂ ಪ್ರಜಾವರ್ಗದವರಿಗೂ ಈ ರೀತಿ ವಾದ ವಿವಾದಗಳು ಉತ್ಪನ್ನವಾಗುವುದು ಅಪರೂಪವೇನೂ ಅಲ್ಲ. ಇಂಥ ವಿವಾದಗಳನ್ನು ತೀರ್ಮಾನಮಾಡುವುದಕ್ಕೋಸ್ಕರ ಉಭಯಪಕ್ಷಗಳಿಗೂ ಸೇರಿರದ ನ್ಯಾಯ ನಿರ್ಣೇತೃ ಇರಬೇಕಾದದ್ದು ಆವಶ್ಯಕವಲ್ಲವೆ? ಈ ಕಾರಣದಿಂದ ಪಾಶ್ಚಾತ್ಯ ರಾಜ್ಯಗಳಲ್ಲಿ ಶಾಸನಪಾಲಕರಾದ ನ್ಯಾಯಾಧಿಪತಿಗಳು ಕಾರ್ಯನಿರ್ವಾಹಕವಾದ ಅಧಿಕಾರಿವರ್ಗಕ್ಕೆ ಅಧೀನರಾಗದೆ, ಸ್ವತಂತ್ರರಾಗಿರತಕ್ಕದ್ದೆಂದು ಗೊತ್ತಾಗಿದೆ. ಶಾಸನ ಪಾರಮ್ಯವೇ ರಾಜ್ಯದ ಮುಖ್ಯಸಲ್ಲಕ್ಷಣವೆಂದು ಹಿಂದೆ ಹೇಳಿದೆವಲ್ಲವೆ? ಕಾನೂನೇ ಎಲ್ಲ ಸಂದರ್ಭಗಳಲ್ಲಿಯೂ ಪ್ರಬಲವಾಗಿ, ಅದು ಎಲ್ಲರ ವಿಷಯದಲ್ಲಿಯೂ ಒಂದೇ ಪ್ರಕಾರವಾಗಿ ಅನ್ವಯಿಸಬೇಕಾದರೆ, ಆ ಕಾನೂನನ್ನು ವ್ಯವಹಾರಗಳಿಗೆ ವಿನಿಯೋಗಿಸಿ ತೀರ್ಮಾನ ಕೊಡತಕ್ಕವರು ನಿಃಸ್ಪೃಹರೂ ನಿಷ್ಪಕ್ಷಪಾತಿಗಳೂ ಸ್ವತಂತ್ರರೂ ಆಗಿರತಕ್ಕದ್ದು ಅತ್ಯಂತಾವಶ್ಯಕ. ನ್ಯಾಯಾಧಿಪತಿಯಾದವನು (ಜಡ್ಜಿ) ಯಾವುದಾದರೊಂದು ಬಗೆಯಲ್ಲಿ ಕಾರ್ಯನಿರ್ವಾಹಕ ಸಂಸ್ಥೆಯ ಉಪಕಾರವನ್ನು ಆಶಿಸುವಂತಿದ್ದರೆ ಅವನ ಮನಶ್ಶುದ್ಧಿ

ಕೆಡಬಹುದೆಂಬ ಶಂಕೆಯುಂಟು. ಆದದ್ದರಿಂದಲೇ ನ್ಯಾಯಾಧಿಕಾರವೂ (ಜ್ಯುಡಿಷಿಯಲ್) ಕಾರ್ಯಾಧಿಕಾರವೂ (ಎಕ್ಸೆಕ್ಯುಟಿವ್) ಒಂದೇಕಡೆ ಒಟ್ಟುಗೂಡಿರಬಾರದೆಂದೂ, ಬೇರೆ ಬೇರೆಯಾಗಿ ಇರಬೇಕೆಂದೂ, ನ್ಯಾಯಾಧಿಕಾರದ ಇಲಾಖೆಯೇ ಬೇರೆಯಾಗಿ ಸ್ವತಂತ್ರವಾಗಿರಬೇಕೆಂದೂ ಈ ದೇಶದಲ್ಲಿ ರಾಜಕೀಯ ಸಂಸ್ಕಾರವಾದಿಗಳು ಹೇಳುತ್ತಿರುವರು.

## ಜಡ್ಜಿಗಳ ಸ್ವಾತಂತ್ರ್ಯ

ಶಾಸನಗಳನ್ನು ಮಾಡುವ ಅಧಿಕಾರವೂ ಅವುಗಳನ್ನು ಪ್ರಯೋಗಕ್ಕೆ (ಎಂದರೆ ಕಾರ್ಯರೂಪಕ್ಕೆ) ತರುವ ಅಧಿಕಾರವೂ ಒಂದೇ ಸಂಸ್ಥೆಯಲ್ಲಿ ಸೇರಿರಬಾರದೆಂದೂ ಹಾಗೆ ಸೇರಿದ್ದರೆ ಅದು "ಬ್ಯೂರೊಕ್ರೆಸಿ" ಅಥವಾ ಕಛೇರಿಯ ದೌಲತ್ತು ಎನಿಸಿಕೊಂಡು ಉತ್ತರಭಾರವಿಲ್ಲದ್ದಾಗಿ, ರಾಜ್ಯದ ಸುವ್ಯವಸ್ಥೆಗೆ ಪ್ರತಿಕೂಲವಾಗುವುದೆಂದೂ ಮೇಲೆಯೇ ಸೂಚಿಸಿದೆ. ಅದೇ ರೀತಿಯಾಗಿ ಶಾಸನಗಳನ್ನು ಜಾರಿಗೆ ತರುವ ಅಧಿಕಾರವೂ ಅವುಗಳನ್ನು ವಿವಾದಗಳಿಗೆ ಅನ್ವಯಿಸುವ ಅಧಿಕಾರವೂ ಒಂದೇ ಸಂಸ್ಥೆಯಲ್ಲಿ ಸೇರಿರಬಾರದು ; ಹಾಗೆ ಸೇರಿದ್ದರೆ ಅದೂ ವ್ಯವಸ್ಥಾಭಂಗವೇ ಆಗುವುದು. ಕಳ್ಳತನವನ್ನು ಆರೋಪಣೆಮಾಡುವುದು ಕಾರ್ಯನಿರ್ವಾಹಸಂಸ್ಥೆಗೆ ಸೇರಿದ ಪೊಲೀಸಿನವರ ಅಧಿಕಾರ ; ಆದರೆ ಆ ಆರೋಪಣೆಗೆ ಗುರಿಯಾದವನು ದಿಟವಾಗಿ ಕದ್ದವನೆ?—ಅಲ್ಲವೆ? ಎಂಬುದನ್ನು ವಿಚಾರಮಾಡಿ, ಶಾಸನದಂತೆ ಶಿಕ್ಷೆ ವಿಧಿಸುವುದು ಪೊಲೀಸಿನವರ ಅಧಿಕಾರವಲ್ಲ; ಅದು ನ್ಯಾಯವಿಮರ್ಶನ ಸಂಸ್ಥೆಗೆ ಸೇರಿದ ಮ್ಯಾಜಿಸ್ಟ್ರೇಟನ ಅಧಿಕಾರ; ಮ್ಯಾಜಿಸ್ಟ್ರೇಟನು ಶಿಕ್ಷೆ ವಿಧಿಸಿದ ಬಳಿಕ ಅಪರಾಧಿಯನ್ನು ಕರೆದುಕೊಂಡುಹೋಗಿ ಶಿಕ್ಷೆಗೆ ಗುರಿಪಡಿಸುವುದು ಪುನಃ ಕಾರ್ಯನಿರ್ವಾಹ ಸಂಸ್ಥೆಗೇ ಸೇರಿದ ಪೊಲೀಸ್ ಮತ್ತು ಜೆಯಿಲ್ ಇಲಾಖೆಗಳವರ ಅಧಿಕಾರ. ಪೊಲೀಸಿನ ಕೆಲಸ

ವನ್ನು ಮ್ಯಾಜಿಸ್ಟ್ರೇಟರು ಯಾವ ಸಂದರ್ಭದಲ್ಲೂ ಮಾಡಲಾಗದು; ಮ್ಯಾಜಿಸ್ಟ್ರೇಟರ ಕೆಲಸವನ್ನು ಪೊಲೀಸಿನವರೂ ಯಾವ ಸಂದರ್ಭದಲ್ಲೂ ಮಾಡಲಾಗದು. ಹೀಗಿಲ್ಲದೆ, ತಪ್ಪನ್ನು ಹೊರಿಸುವವರೇ ಶಿಕ್ಷೆಯನ್ನೂ ವಿಧಿಸಬಹುದಾದರೆ ಕ್ರಮವಾದ ನ್ಯಾಯವಿಮರ್ಶೆಗೆ ಅವಕಾಶವೆಲ್ಲಿದ್ದೀತು? ಎಲ್ಲಿ ಕಾರ್ಯ ನಿರ್ವಾಹಸಂಸ್ಥೆಯು (ಎಕ್ಸೆಕ್ಯುಟಿವ್) ನ್ಯಾಯಸ್ಥಾನ (ಕೋರ್ಟು)ಗಳ ಸಹಾಯವನ್ನಪೇಕ್ಷಿಸದೆಯೇ ಪ್ರಜೆಯಮೇಲೆ ದೋಷವನ್ನಾರೋಪಿಸಿ, ಶಿಕ್ಷೆದಂಡನೆಗಳನ್ನು ತಾನೇ ವಿಧಿಸುವುದೋ, ಅಲ್ಲಿ ಶಾಸನ ಪಾರಮ್ಯವು ಇಲ್ಲದೆ ಹೋಗುವುದು. ಏಕೆಂದರೆ ಎಲ್ಲ ಶಾಸನಗಳಿಗೂ ಅರ್ಥಮಾಡಿ ಅವುಗಳನ್ನು ವಿನಿಯೋಗಿಸಬೇಕಾದವರು ಕಾರ್ಯನಿರ್ವಾಹಕರಲ್ಲ, ಕಾರ್ಯ ನಿರ್ವಾಹಕ ಸಂಸ್ಥೆಗೆ ಅಧೀನರಲ್ಲದ ನ್ಯಾಯಾಧಿಕಾರಿಗಳು—ಎಂಬುದು ಎಲ್ಲ ಶಾಸನಗಳಿಗೂ ಅನ್ವಯಿಸಬೇಕಾದ ಮೂಲ ಶಾಸನ. ನ್ಯಾಯಾಧಿಕಾರಿಗಳು ಪ್ರಮಾಣ ಕೈಫಿಯತ್ತುಗಳನ್ನು ತೆಗೆದುಕೊಳ್ಳುವುದರಲ್ಲಿಯೂ ವಿಚಾರಣೆಮಾಡುವಲ್ಲಿಯೂ ತೀರ್ಮಾನಕೊಡುವಲ್ಲಿಯೂ ಅನುಸರಿಸಬೇಕಾದ ಕ್ರಮಗಳುಂಟು. ಆ ಕ್ರಮಗಳನ್ನನುಸರಿಸಿ ಕೆಲಸಮಾಡಿದಲ್ಲದೆ ನ್ಯಾಯ ನಿರ್ಣಯವು ಸರಿಯಾಗಿ ಆಗಲಾರದು. ಆದಕಾರಣ ಎಲ್ಲ ಸರಿಯಾದ ಶಾಸನಗಳೂ ವಿವಾದ ಸಂದರ್ಭಗಳಲ್ಲಿ (ಕೋರ್ಟು) ನ್ಯಾಯಸ್ಥಾನಗಳ ಮುಖಾಂತರವೇ ಕೆಲಸಮಾಡಬೇಕು. ಯಾವ ಶಾಸನವು ನ್ಯಾಯಾಧಿಕಾರಿ (ಜಡ್ಜಿ)ಗಳ ವಿಮರ್ಶೆಯನ್ನು ಬಯಸದೆ, ಶಿಕ್ಷೆ ದಂಡನೆಗಳ ಅಧಿಕಾರವನ್ನು (ಎಕ್ಸೆಕ್ಯುಟಿವ್) ಕಾರ್ಯನಿರ್ವಾಹಕರಿಗೇ ಒಪ್ಪಿಸುವುದೋ ಅದು ಕ್ರಮವಾದ ಶಾಸನವೇ ಅಲ್ಲ. ಆದದ್ದರಿಂದಲೇ ಕಾರ್ಯನಿರ್ವಾಹಕ ಸಂಸ್ಥೆಯು ಪ್ರಜೆಯಾದೊಬ್ಬನಿಗೆ ಯಾವ ದಂಡ ಶಿಕ್ಷೆಗಳನ್ನು ಮಾಡಿಸಬೇಕೆಂದಿಷ್ಟಪಟ್ಟರೂ, ಅದು ಕ್ರಮವಾದ ನ್ಯಾಯಸ್ಥಾನ (ಕೋರ್ಟು)ಗಳ ಮೂಲಕ ಆ ಕೆಲಸವನು ಮಾಡಿಸ

ಬೇಕಲ್ಲದೆ, ತಾನೇ ಸ್ವತಂತ್ರಿಸಿ ತನ್ನ ಕೈಯಿಂದಲೇ ಆ ಕೆಲಸವನ್ನು ಮಾಡಕೂಡದೆಂದು ರಾಜ್ಯಸಂಸ್ಥಾ ಸಂಸ್ಕಾರಕರು ವಾದಿಸುತ್ತಾರೆ.

ಶಾಸನಸಂಸ್ಥೆಯೇ ನ್ಯಾಯನಿರ್ಣಯವನ್ನೂ ಕೈಕೊಳ್ಳಲಾಗದೆಂಬುದಕ್ಕೆ ಕಾರಣಗಳನ್ನು ವಿಸ್ತಾರವಾಗಿ ಹೇಳಬೇಕಾದ ಆವಶ್ಯಕತೆ ಹೆಚ್ಚಾಗಿರುವಂತೆ ತೋರುವುದಿಲ್ಲ. ಶಾಸಕಸಂಸ್ಥೆಯು ಬಹು ಸದಸ್ಯರುಳ್ಳುದು; ಅಷ್ಟು ಮಂದಿಯೂ ಕುಳಿತು ವಿವಾದದ ಸೂಕ್ಷ್ಮಾಂಶಗಳನ್ನು ವಿಚಾರಿಸುವುದು ಸಾಧ್ಯವೇ ಅಲ್ಲ. ಅಲ್ಲದೆ ನ್ಯಾಯಾಧಿಕಾರಿಗಳಿಗಿರಬೇಕಾದ ವ್ಯವಹಾರ ಶಾಸ್ತ್ರಜ್ಞಾನವೂ ವ್ಯವಹಾರಾನುಭವವೂ ಶಾಸನ ಸಂಸ್ಥೆಯಲ್ಲಿ ಪ್ರಜಾಪ್ರತಿನಿಧಿಗಳಾಗಿ ಬಂದು ಕೂಡುವವರಿಗೆ ಇರುವುದು ಅಪರೂಪ. ಇಷ್ಟರ ಮೇಲೆ ಶಾಸನಗಳಿಗೆ ಅರ್ಥಮಾಡಿ ಅವುಗಳನ್ನು ವಿನಿಯೋಗಿಸುವ ಕಾಲದಲ್ಲಿ ಕೆಲಮಂದಿ ಶಾಸನಕರ್ತರು ಒಂದು ಬಗೆಯಾಗಿಯೂ ಇನ್ನು ಕೆಲಮಂದಿ ಇನ್ನೊಂದು ಬಗೆಯಾಗಿಯೂ ಅಭಿಪ್ರಾಯಪಟ್ಟರೆ ಶಾಸನವೇ ವಿರೂಪವನ್ನು ಹೊಂದುವುದು. ಶಾಸಕಸಂಸ್ಥೆಯಲ್ಲಿಯ ವ್ಯಕ್ತಿಗಳು ಆಗಾಗ ಬದಲಾಯಿಸುತ್ತಿರುವುದರಿಂದಲೂ ಅವರಲ್ಲಿ ಕಕ್ಷಿಗಳಿರುವುದರಿಂದಲೂ ಅವರೇ ಶಾಸನವನ್ನು ನಿಯೋಜಿಸುವಂತಾದರೆ, ಅದು ಪದೇ ಪದೇ ಹಿಂದಕ್ಕೂ ಮುಂದಕ್ಕೂ ಈಕಡೆಗೂ ಆಕಡೆಗೂ ಎಳೆಯಲ್ಪಟ್ಟು, ತನ್ನ ಮುಖ್ಯಲಕ್ಷಣವಾದ ನಿಯತತೆಯನ್ನೂ ಸ್ಥಿರತೆಯನ್ನೂ ಕಳೆದುಕೊಂಡೀತೆಂಬ ಭೀತಿಗೆ ತುಂಬಾ ಅವಕಾಶವುಂಟು.

## ನ್ಯಾಯವಿಮರ್ಶೆಯ ರೀತಿ

ಮನು ಯಾಜ್ಞವಲ್ಕ್ಯಾದಿ ಮಹರ್ಷಿಗಳು ಹೇಳಿರುವಂತೆ, ಕ್ರೋಧಲೋಭಗಳಿಲ್ಲದವನಾಗಿ ಸತ್ಯಾಂಶವನ್ನು ಪರಿಶೀಲಿಸಿ, ಭೂತದಯಾಪರನಾಗಿ ಶಾಸನವಾಕ್ಯಗಳಿಗೆ ಅರ್ಥ ಮಾಡಿ

ಅದರಂತೆ ವಿಧಿಸುವುದು ನ್ಯಾಯಾಧಿಪತಿಯ ಕರ್ತವ್ಯವೇ ಹೊರತು, ಇರತಕ್ಕ ಶಾಸನದಲ್ಲಿ ದೋಷವುಂಟೆಂದು ಅದನ್ನು ತಿದ್ದುವುದಾಗಲಿ ಇಲ್ಲದಿರುವ ಶಾಸನವನ್ನು ಸ್ವತಃ ಕಲ್ಪಿಸಿಕೊಳ್ಳು ವುದಾಗಲಿ ಅವನ ಕರ್ತವ್ಯವಲ್ಲ. ಕೆಲವು ಸಂದರ್ಭಗಳಲ್ಲಿ ಇರುವ ಶಾಸನವು ಸಾಲದೆಹೋದರೂ, ಅಥವಾ ಅದರ ವಾಕ್ಯವು ಸಂದೇಹಾಸ್ಪದವಾಗಿದ್ದರೂ, ಆತನು ಅದನ್ನು ಸೂಚಿಸಿ, ಸಾಮಾನ್ಯ ಧರ್ಮನಿಯಮಗಳನ್ನನುಸರಿಸಿ ತನ್ನ ನೀತಿಸೂಕ್ಷ್ಮ ಜ್ಞಾನದಿಂದ ತೀರ್ಮಾನ ಕೊಡಬೇಕಾಗಬಹುದು. ಆದರೆ ಹೀಗೆ ಆತನು ಕೊಟ್ಟ ತೀರ್ಮಾನವು ಸ್ಪಷ್ಟವಾಗಿರುವ ಶಾಸನಕ್ಕೆ ವಿರುದ್ಧವಾಗಬಾರದು. ಹಿಂದೆ ಒಂದಾನೊಂದು ಕಾಲದಲ್ಲಿ ಇಂಗ್ಲೆಂಡಿನ ರಾಜರೊಬ್ಬರು ಪಾರ್ಲಿಮೆಂಟಿನ ಅನುಮತಿಯಿಲ್ಲ ದೆಯೇ ತೆರಿಗೆಗಳನ್ನು ವಿಧಿಸಿದ್ದಾಗ, ಪ್ರಜೆಗಳಲ್ಲಿ ಕೆಲಮಂದಿ ಆ ತೆರಿಗೆಗಳನ್ನು ಕೊಡಲು ಒಪ್ಪದಿರಲು, ಆ ವಿವಾದಗಳು ನ್ಯಾಯ ಸ್ಥಾನ (ಕೋರ್ಟು)ಗಳಿಗೆ ಬಂದವು. ಆಗ ಕೆಲಮಂದಿ ನ್ಯಾಯಾಧಿಪತಿಗಳು ಆ ತೆರಿಗೆಗಳು ಪಾರ್ಲಿಮೆಂಟಿನ ಶಾಸನ ವನ್ನನುಸರಿಸದೆ ಇದ್ದರೂ ಆಗಿನ ರಾಜಕಾರ್ಯಾವಸರದಂತೆ ವಿಧಿಸಲ್ಪಟ್ಟಿದ್ದವಾದಕಾರಣ, ಅವು ಪ್ರತಿಭಟಿಸಲರ್ಹವಾದವು ಗಳಲ್ಲವೆಂದೂ, ಪಾರ್ಲಿಮೆಂಟಿನ ಅನುಮತಿಯಿಲ್ಲದೆ ಅಂಥ ತೆರಿಗೆ ಗಳನ್ನು ಹಾಕುವ ಅಧಿಕಾರವು ರಾಜನಲ್ಲಿಯೇ ಸ್ವತಃ ಇರುವು ದೆಂದೂ ವಾದಿಸಿದರು. ಅದರಿಂದ ಶಾಸನಪಾರಮ್ಯಕ್ಕೆ ಕುಂದು ಬಂದು, ರಾಜ್ಯಶಾಸನಕ್ಕಿಂತ ರಾಜನು ಮೇಲ್ಪಟ್ಟವನೆಂದು ಹೇಳಿದಂತಾಯಿತು. ಆಗ ಇಂಗ್ಲೆಂಡಿನ ನ್ಯಾಯಾಧಿಕಾರಿ (ಜಡ್ಜಿ)ಗಳು ರಾಜಭೀತಿಯಿಂದ ಆ ಪ್ರಕಾರವಾಗಿ ವಾದಿಸ ಬೇಕಾಯಿತು. ಈಗ ಇಂಗ್ಲೆಂಡಿನ ಜಡ್ಜಿಗಳು ಯಾವ ಭಯ ದಾಕ್ಷಿಣ್ಯಗಳಿಗೂ ಒಳಪಟ್ಟವರಲ್ಲ. ಅವರನ್ನು ಕೆಲಸದಿಂದ ತೆಗೆದುಹಾಕಿಸಬೇಕಾದರೆ ಈಗ ಪಾರ್ಲಿಮೆಂಟು ಸಭೆಯ ಸಾಮಾನ್ಯ ಕಕ್ಷ್ಯ ಶ್ರೀಮಂತ ಕಕ್ಷ್ಯಗಳೆರಡೂ ಸೇರಿ ರಾಜ

ರಿಗೆ ಮನವಿ ಮಾಡಿಕೊಳ್ಳಬೇಕು. ಹಾಗಾಗದೆ ಜಡ್ಜಿಗಳಿಗೆ ಚ್ಯುತಿಯಿಲ್ಲ. ಪಾರ್ಲಿಮೆಂಟಿಗಿರುವ ಈ ಅಧಿಕಾರವೂ ಅಲ್ಲಿಯ ಅಪೀಲುಗಳ ಏರ್ಪಾಟೂ ಅಲ್ಲಿಯ ನ್ಯಾಯವಾದಿ (ಲಾಯರು) ಗಳ ಸಾಮರ್ಥ್ಯ ಜಾಗರೂಕತೆಗಳೂ ಅಲ್ಲಿಯ ಜನವಾಕ್ಯ ಮಹಿಮೆಯೂ ಸಹ ಸೇರಿ, ಇಂಗ್ಲೆಂಡಿನ ನ್ಯಾಯನಿರ್ಣಯ ಸಂಸ್ಥೆಯ ಕ್ರಮವನ್ನು ಪರಿಶುದ್ಧಿಗೊಳಿಸುತ್ತಿರುವುದರಿಂದ, ಅದಕ್ಕೆ ಅತ್ಯುತ್ತಮ ವ್ಯವಸ್ಥೆಯೆಂಬ ಖ್ಯಾತಿಯು ಉಂಟಾಗಿದೆ. ನಮ್ಮ ಮನುಗಳಂತೂ ನ್ಯಾಯನಿರ್ಣಯದಲ್ಲಿ ಧರ್ಮನಿಷ್ಠ ರಾದವರನ್ನು ಅತಿಶಯವಾಗಿ ಪ್ರಶಂಸಿಸಿರುವರು. ವ್ಯವಹಾರ ಗಳನ್ನು ತೀರ್ಮಾನಿಸುವ ಕೆಲಸವನ್ನು ರಾಜನು ಸ್ವತಃ ಮಾಡ ಲಿಕ್ಕಾಗದ ಸಂದರ್ಭದಲ್ಲಿ, ಆತನು ಆ ಕೆಲಸಕ್ಕಾಗಿ ಒಬ್ಬ ವೇದಶಾಸ್ತ್ರಜ್ಞನಾದ ಬ್ರಾಹ್ಮಣನನ್ನು ನಿಯಮಿಸಬಹುದು. ಹೀಗೆ ನಿಯಮಿತನಾದ ನ್ಯಾಯಾಧಿಕಾರಿಗೆ ಪ್ರಾಡ್ವಿವಾಕನೆಂದು ಹೆಸರು. ಈತನು ಇತರ ಮೂರು ಮಂದಿ ವಿದ್ವಾಂಸರೊಡನೆ ಸೇರಿ ಸಭೆ ಮಾಡಿಕೊಂಡು ವಿವಾದಗಳಲ್ಲಿ ತೀರ್ಮಾನಗಳನ್ನು ಕೊಡಬಹುದು. ಹೀಗೆ ನ್ಯಾಯವನ್ನು ನಿರ್ಣಯಿಸುವುದಕ್ಕಾಗಿ ಏರ್ಪಟ್ಟಿರುವ ಸಭೆಯಲ್ಲಿ ಒಂದು ವೇಳೆ ಧರ್ಮಕ್ಕೆ ಅಧರ್ಮ ದಿಂದ ಹಾನಿಯುಂಟಾದರೆ, ಆಗ ಅದು ಆ ಸಭಾಸದರಿಗೆ ಶಲ್ಯ ಪ್ರಾಯವಾಗುವುದು. ಧರ್ಮವು ತನ್ನನ್ನು ಕೊಂದವನನ್ನು ಕೊಲ್ಲುವುದು ; ತನ್ನನ್ನು ಸಲಹಿದವನನ್ನು ಸಲಹುವುದು. ಅಧರ್ಮದ ಪಾಪದಲ್ಲಿ ಹಾಗಪಾಲು ಮೊದಲು ಅದನ್ನು ಮಾಡಿದವನನ್ನೂ, ಇನ್ನೊಂದು ಹಾಗಪಾಲು ಅವನ ಪರವಾಗಿ ಸಾಕ್ಷ್ಯ ಹೇಳಿದವನನ್ನೂ, ಇನ್ನೊಂದು ಹಾಗಪಾಲು ಸಭಾ ಸದರನ್ನೂ, ಉಳಿದ ಹಾಗಪಾಲು ರಾಜನನ್ನೂ ಹಿಡಿಯುವುದು. ಮನುಗಳವರು ಹೀಗೆಂದು ಹೇಳಿ ನ್ಯಾಯದ ಪರಮಪೂಜ್ಯತೆ ಯನ್ನು ತಿಳಿಯಪಡಿಸಿದ್ದಾರೆ.

ಶಾಸನಸಂಸ್ಥೆ, ಕಾರ್ಯಸಂಸ್ಥೆ, ನ್ಯಾಯಸಂಸ್ಥೆ—ಈ

ಮೂರು ಕರಣಗಳೂ ಸಾಮಾನ್ಯವಾಗಿ ಪ್ರತ್ಯೇಕಗಳಾಗಿದ್ದು ಕೊಂಡು ತಮ್ಮ ತಮ್ಮ ಕೆಲಸಗಳನ್ನು ಮಾಡತಕ್ಕವಾದರೂ, ಕೆಲವು ವಿಶೇಷ ಸಂದರ್ಭಗಳಲ್ಲಿ ಒಂದು ಕರಣವು ಮತ್ತೊಂದರ ಕೆಲಸವನ್ನು ಮಾಡಬೇಕಾಗುವುದೂ ಉಂಟೆಂದು ಮೊದಲೇ ಹೇಳಿರುತ್ತೇವೆ. ಉಸಿರಾಡಿಸುವುದು ಮೂಗಿನ ಕೆಲಸ ವಾದರೂ ಬಾಯಿಂದಲೂ ಉಸಿರಾಡುವುದುಂಟಲ್ಲವೆ? ಹೆಬ್ಬೆರಳಿ ನೊಡನೆ ಸೇರಿ ಲೇಖಣಿಯನ್ನು ಹಿಡಿಯುವುದು ತರ್ಜನೀ ಬೆರಳಾದರೂ ಒಂದೊಂದು ವೇಳೆ ಮಧ್ಯಮದಿಂದಲೂ ಅದನ್ನು ಹಿಡಿಯಲಾಗುವುದಿಲ್ಲವೆ? ಕೆಲವು ಸಂದಿಗ್ಧ ಪ್ರಕರಣಗಳಿಗೆ ನ್ಯಾಯಾಧಿಕಾರಿಯು ತಾನೇ ಶಾಸನದಲ್ಲಿಲ್ಲದ್ದನ್ನು ಊಹಿಸಿ ಕೊಳ್ಳಬೇಕಾಗಬಹುದು ಅಥವಾ ಕಾರ್ಯಾಧಿಕಾರವನ್ನೂ ನಡೆಯಿಸಬೇಕಾಗಬಹುದು. ಅದರಂತೆಯೇ ಕಾರ್ಯಾಧಿಕಾ ರಿಯೂ ಕೆಲವು ವಿಷಯಗಳಲ್ಲಿ ನ್ಯಾಯಾಧಿಕಾರಿಗೆ ಮಾತ್ರ ಸಲ್ಲುವ ವಿವೇಚನಸ್ವಾತಂತ್ರ್ಯವನ್ನು ತಾನೇ ಉಪಯೋಗಿಸಿ ಕೆಲಸ ನಡಸಬೇಕಾಗಬಹುದು. ಹೀಗೆ ಅಧಿಕಾರಗಳು ಸಂಕೀರ್ಣ ವಾಗುವುದು ರಾಜ್ಯಕಾರ್ಯಗಳ ವಿವಿಧ ವೈಲಕ್ಷಣ್ಯಗಳಿಗೆ ತಕ್ಕಂತೆ ಆವಶ್ಯಕವಾದರೂ, ಅಂಥ ಸಂಕೀರ್ಣ ಸಂಭವ ಗಳನ್ನು ಸಾಧ್ಯವಾದಷ್ಟು ಕಡಮೆಮಾಡಬೇಕೆನ್ನುವುದು ಮುಖ್ಯ ವಾದ ತತ್ತ್ವ.

ಈ ಮೂರು ಕರಣಗಳಿಗೂ ಜೀವಶಕ್ತಿ ಕೊಡತಕ್ಕವನು ರಾಜ್ಯದ ಪ್ರಧಾನಾಂಗನಾದ ರಾಜನು. ಶಾಸನಗಳಿಗೆ ಪೂರ್ಣತೆ ಯುಂಟಾಗುವುದು ಆತನ ಮುದ್ರಿಕೆಯಿಂದ; ಕಾರ್ಯಗಳು ಸಾಗುವುದು ಆತನ ಪ್ರಭಾವದಿಂದ; ವಿವಾದಗಳು ಮುಗಿಯು ವುದು ಆತನ ದಂಡಬಲದಿಂದ. ಪರಬ್ರಹ್ಮತತ್ತ್ವವು ತಾನಾಗಿ ಯಾವ ಜಗದ್ವ್ಯಾಪಾರವನ್ನೂ ಮಾಡದೆ ಬ್ರಹ್ಮ, ವಿಷ್ಣು, ರುದ್ರ ರೆಂಬ ಮೂರ್ತಿತ್ರಯದಲ್ಲಿ ತನ್ನ ಅಂಶಗಳನ್ನು ಹಂಚಿ, ಅವರಿಂದ ವಿವಿಧಕಾರ್ಯಗಳನ್ನು ಮಾಡಿಸುತ್ತಿದೆಯೆಂದು ನಮ್ಮ ಹಿಂದೂ

ಮತದಲ್ಲಿ ಹೇಳಿರುವಂತೆ, ರಾಜನು ತಾನೇ ಸ್ವಂತವಾಗಿ ಯಾವ ರಾಜ್ಯವ್ಯಾಪಾರವನ್ನೂ ಮಾಡದೆ, ತನ್ನ ಶಕ್ತಿಯನ್ನು ರಾಜ್ಯದ ಕರಣತ್ರಯದಲ್ಲಿ ಹಂಚಿರುವುದರಿಂದ, ಶಾಸಕಸಂಸ್ಥೆಯು ಎಲ್ಲ ರಾಜ್ಯವ್ಯಾಪಾರಗಳಿಗೂ ಆದಿಯೂ ವಿಧಾಯಕವೂ ಆಗಿಯೂ, ಕಾರ್ಯಕಾರಿ ಸಂಸ್ಥೆಯು ಎಲ್ಲ ವಿಷಯದಲ್ಲಿಯೂ ಚಾಲಕವೂ ಪಾಲಕವೂ ಆಗಿಯೂ, ನ್ಯಾಯನಿರ್ಣಯ ಸಂಸ್ಥೆಯು ಎಲ್ಲ ವಿವಾದಗಳಿಗೂ ಸಮಾಪ್ತಿಯೂ ಶಾಂತಿಯೂ ಆಗಿಯೂ ಇರುತ್ತವೆ. ಈ ಮೂರು ಸಂಸ್ಥೆಗಳಿಂದಾಗಿರುವ ರಾಜ್ಯ ಯಂತ್ರಕ್ಕೆ ರಾಜನೂ ಒಂದು ಭಾಗವಾಗಿದ್ದರೂ—ಅದರ ಅತ್ಯಂತ ಮುಖ್ಯಭಾಗವೇ ಆಗಿದ್ದರೂ—ಆತನು ಯಾವ ವಿಷಯ ದಲ್ಲಿಯೂ ಸ್ವತಃ ಪ್ರವೃತ್ತನಾಗುವವನಲ್ಲ; ಆತನು ಆ ಯಂತ್ರಕ್ಕೆ ಪ್ರಧಾನಾಕ್ಷವೆಂದು ಹೇಳಬಹುದು. ಯಂತ್ರಚಕ್ರದಲ್ಲಿರುವ ಅಕ್ಷವು—ಎಂದರೆ ಅಚ್ಚು—ಪ್ರತ್ಯಕ್ಷವಾಗಿ ಯಾವ ಕೆಲಸವನ್ನೂ ಮಾಡುವುದಿಲ್ಲ; ಅದು ಒಳಗಿದ್ದುಕೊಂಡು ಚಕ್ರವನ್ನು ಅದರ ಸ್ಥಾನದಲ್ಲಿ ಹಿಡಿದಿರಿಸಿರುತ್ತದೆ; ಅದನ್ನನುಸರಿಸಿ ಚಕ್ರವು ಸುತ್ತಿ, ಇತರ ಚಕ್ರಗಳನ್ನೂ ತಿರುಗಿಸಿ, ಆ ರೀತಿ ಯಂತ್ರದಿಂದಾಗ ಬೇಕಾದ ಕಾರ್ಯಗಳನ್ನು ಮಾಡಿಸುತ್ತದೆ. ಅಚ್ಚು ಹೊರಕ್ಕೆ ಕಾಣುವುದಿಲ್ಲ; ಅದಕ್ಕೆ ಹಲ್ಲುಗಳಿಲ್ಲ; ಆದರೆ ಅದನ್ನು ತೆಗೆದು ಹಾಕಿದಮೇಲೆ ಯಂತ್ರವೆಲ್ಲಿ?

---

# ೧೨. ರಾಜ್ಯದಲ್ಲಿ ರಾಜನ ಸ್ಥಾನ

ರಾಜ್ಯಕ್ಕೆ ರಾಜನ ಮಹತ್ತ್ವವೆಷ್ಟರದೆಂಬುದನ್ನೂ ರಾಜ್ಯ ಯಂತ್ರದಲ್ಲಿ ಆತನ ಸ್ಥಿತಿ ಎಂಥಾದ್ದೆಂಬುದನ್ನೂ ಹಿಂದೆ ಸೂಚಿಸಿದ್ದಾಗಿದೆ. ರಾಜ್ಯವ್ಯವಸ್ಥೆಯು ನಿರಾತಂಕವಾಗಿಯೂ ತೃಪ್ತಿಕರವಾಗಿಯೂ ನಡೆಯಬೇಕಾದರೆ ರಾಜನು ಎಂಥ ಗುಣಗಳನ್ನಾರ್ಜಿಸಬೇಕು? ಹೇಗೆ ನಡೆದುಕೊಳ್ಳಬೇಕು? ಎಂಬುದನ್ನೀಗ ವಿಚಾರಮಾಡಬೇಕಾಗಿದೆ.

## ಪ್ರಾಚೀನ ಮತ

ರಾಜನು ಎಂಥ ಗುಣಗಳುಳ್ಳವನಾಗಿರಬೇಕೆಂಬುದನ್ನು ಮಹಾಭಾರತದ ಶಾಂತಿಪರ್ವದಲ್ಲಿ ಭೀಷ್ಮಾಚಾರ್ಯರು ಧರ್ಮರಾಯನಿಗೆ ವಿಸ್ತಾರವಾಗಿ ಉಪದೇಶಿಸಿರುವರು :

"ರಾಜನಾದವನು ದೇವಬ್ರಾಹ್ಮಣ ಪೂಜೆಯಲ್ಲಿ ನಿರತನಾಗಿರಬೇಕು; ಸರ್ವದಾ ಉತ್ಥಾನವುಳ್ಳವನಾಗಿರಬೇಕು—ಎಂದರೆ ಪುರುಷಪ್ರಯತ್ನವುಳ್ಳವನಾಗಬೇಕು; ಪ್ರಯತ್ನವು ವಿಫಲವಾದರೂ ಮರಳಿ ಪ್ರಯತ್ನವನ್ನು ಮಾಡಬೇಕು. ಸತ್ಯವ್ರತನಾಗಿರಬೇಕು; ಗುಣವಂತನೂ, ಶೀಲವಂತನೂ, ಮೃದುಸ್ವಭಾವದವನೂ, ಧರ್ಮಿಷ್ಠನೂ, ಜಿತೇಂದ್ರಿಯನೂ, ಪ್ರಸನ್ನರೂಪಿಯೂ ಆಗಿರಬೇಕು. ಪ್ರತ್ಯಕ್ಷ ಸಂಗತಿಗಳಿಂದಲೂ, ಸ್ವಾನುಭವದಿಂದಲೂ, ಹೋಲಿಸಿ ನೋಡೋಣದರಿಂದಲೂ ತನ್ನವರಾರು, ಇತರರಾರು, ಎಂಬುದನ್ನು ವಿಮರ್ಶೆಮಾಡಿ ತಿಳಿಯಬೇಕು. ಬೇಟೆ, ದ್ಯೂತ ಮೊದಲಾದ ವ್ಯಸನಗಳನ್ನು ವರ್ಜಿಸಿರಬೇಕು. ಗರ್ಭವತಿಯಾದ ಹೆಂಗಸು ಹೇಗೆ ತನ್ನ ಮತ್ತು ತನ್ನ ಪತಿಯ ಇಷ್ಟಗಳನ್ನು ಲೆಕ್ಕಿಸದೆ ತನ್ನ ಗರ್ಭದ ಹಿತವನ್ನೇ ಚಿಂತಿಸುತ್ತಾ ಅದಕ್ಕೆ ವಿರೋಧವಾದ ಎಲ್ಲ ಸುಖಗಳನ್ನೂ ತ್ಯಜಿಸುವಳೋ, ರಾಜನಾದವನು ಹಾಗೆ ತನ್ನ ಅಭಿಲಾಷೆಗಳನ್ನೆಲ್ಲ ಪ್ರಜಾಹಿತಕ್ಕೋಸ್ಕರ ನಿಗ್ರಹಿಸಿಕೊಳ್ಳಬೇಕು. ಭೃತ್ಯರೊಡನೆ ಆತನು ಪರಿಹಾಸ್ಯಗಳನ್ನಾಡಬಾರದು; ಅವರೊಡನೆ ಅತಿಯಾಗಿ ಬಳಕೆಯನ್ನು ಬೆಳಸಬಾರದು; ಹಾಗೆ ಮಾಡಿದರೆ ಆ ಅಧಿಕಾರಿಗಳು ರಾಜನ ಮಾತಿನಲ್ಲಿ ಗೌರವವಿಲ್ಲದವರಾಗಬಹುದು, ಅಥವಾ ಪ್ರತಿರೂಪಕ (ಸೃಷ್ಟನೆ ಮಾಡಿದ ಆಜ್ಞೆ, "ಫೋರ್ಜರಿ"

ಆದ "ಆರ್ಡರು")ಗಳಿಂದ ವಂಚನೆ ಮಾಡಬಹುದು. ರಾಜನು ನಿರಂತರವೂ ಉದ್ಯೋಗಶಾಲಿಯಾಗಿರಬೇಕು; ವರ್ಣಾಶ್ರಮಧರ್ಮಗಳನ್ನು ಪರಿಪಾಲಿಸುತ್ತ ಲೋಕರಂಜನೆಯಲ್ಲಿಯೇ ಬುದ್ಧಿಯನ್ನಿಟ್ಟಿರಬೇಕು. ಪರದ್ರವ್ಯವನ್ನಪಹರಿಸದೆ, ತಾನು ಕೊಡಬೇಕಾದುದನ್ನು ಯುಕ್ತಕಾಲದಲ್ಲಿ ಕೊಡುತ್ತ, ರಾಜ್ಯಕೋಶ ವಿಷಯದಲ್ಲಿ ಜಾಗರೂಕನಾಗಿರಬೇಕು. ವೃದ್ಧರನ್ನೂ, ಸಾಧುಗಳನ್ನೂ, ಶಾಸ್ತ್ರಜ್ಞರನ್ನೂ ಸಂತೋಷಪಡಿಸಿ ತನ್ನ ಸಹಾಯಕ್ಕೆ ಇಟ್ಟುಕೊಂಡಿರಬೇಕು. ತಂದೆಯ ಮನೆಯಲ್ಲಿ ಮಕ್ಕಳು ನಿರ್ಭಯವಾಗಿ ಚರಿಸುವಂತೆ ಯಾರ ರಾಜ್ಯದಲ್ಲಿ ಪ್ರಜೆಗಳು ಭಯವಿಲ್ಲದೆ, ನೀತಿ ಅಪನೀತಿಗಳನ್ನರಿತವರಾಗಿ ಬಾಳುವರೋ ಮತ್ತು ಯಾರ ರಾಜ್ಯದಲ್ಲಿ ಜನರು ತಮ್ಮ ಧನವನ್ನು ಬಚ್ಚಿಟ್ಟುಕೊಳ್ಳಬೇಕಾದ ಆವಶ್ಯಕವಿಲ್ಲವೋ ಆತನೇ ರಾಜೋತ್ತಮನು"—ಭೀಷ್ಮಾನುಶಾಸನವು ಈ ಪ್ರಕಾರವಾಗಿದೆ.

ಮನುಗಳವರೂ ರಾಜಧರ್ಮಗಳನ್ನು ವಿಸ್ತಾರವಾಗಿ ವಿವರಿಸಿದ್ದಾರೆ:—

"ರಾಜನು ಪ್ರತಿನಿತ್ಯವೂ ಪ್ರಾತಃಕಾಲದಲ್ಲಿ ಬ್ರಾಹ್ಮಣರನ್ನೂ ವೃದ್ಧರನ್ನೂ ಸೇವಿಸಿ, ಅವರ ಉಪದೇಶವನ್ನು ಲಾಲಿಸಿ, ಅವರಿಂದ ವಿನಯವನ್ನು ಅಭ್ಯಸಿಸಬೇಕು; ಅವಿನಯದಿಂದಲೇ ನಹುಷ, ಸುದಾಸ, ನಿಮಿ ಮೊದಲಾದ ಬಹುಮಂದಿ ರಾಜರುಗಳು ನಾಶಹೊಂದಿದರು; ವಿನಯದಿಂದ ಪೃಥು ಮನುಗಳು ರಾಜ್ಯವನ್ನೂ, ಕುಬೇರನು ಐಶ್ವರ್ಯವನ್ನೂ, ವಿಶ್ವಾಮಿತ್ರನು ಬ್ರಾಹ್ಮಣ್ಯವನ್ನೂ ಪಡೆದರು. ರಾಜನಾದವನು ವಿದ್ವಾಂಸರಿಂದ ವೇದಶಾಸ್ತ್ರಗಳನ್ನೂ, ದಂಡನೀತಿ (ವ್ಯವಹಾರ ಧರ್ಮಶಾಸ್ತ್ರ—"ಲಾ")ಯನ್ನೂ, ಅರ್ಥಶಾಸ್ತ್ರವನ್ನೂ, ಆತ್ಮವಿದ್ಯೆಯನ್ನೂ ಸಹ ಕಲಿಯಬೇಕು. ಇಂದ್ರಿಯಗಳನ್ನು ಜಯಿಸಿದವನಾಗಿ, ಕಾಮಕ್ರೋಧಗಳನ್ನು ತ್ಯಜಿಸಿ, ವ್ಯಸನಗಳನ್ನು ದೂರಮಾಡಬೇಕು. ಒಳ್ಳೆಯ ಮಂತ್ರಿಗಳನ್ನಾರಿಸಿಕೊಂಡು ಅವರೊಡನೆ ರಾಜ್ಯಕಾರ್ಯಗಳ ಪರಿಯನ್ನಾಲೋಚಿಸಬೇಕು. ದೂತರನ್ನು ಸರಿಯಾಗಿ ನಿಯಮಿಸಿ ಗಡಿದುರ್ಗಗಳನ್ನು ಭದ್ರವಾಗಿಟ್ಟಿರಬೇಕು. ರೂಪ ಗುಣಲಕ್ಷಣ ಸಂಪನ್ನಳೂ ಸತ್ಕುಲಪ್ರಸೂತಳೂ ಆದಾಕೆಯನ್ನು ಮದುವೆಮಾಡಿಕೊಂಡು, ಸುರಕ್ಷಿತ ಪ್ರದೇಶದಲ್ಲಿ ಕಟ್ಟಿರುವ ಶುಚಿಯಾದ ಮನೆಯಲ್ಲಿ ವಾಸಮಾಡಬೇಕು. ಒಳ್ಳೆಯ ಪುರೋಹಿತರನ್ನಿಟ್ಟುಕೊಂಡು ಅವರಿಂದ ದೇವಕಾರ್ಯಗಳನ್ನು ಮಾಡಿಸಬೇಕು. ವಿವಿಧಗಳಾದ ರಾಜ್ಯಕಾರ್ಯ (ಇಲಾಖೆ)ಗಳಿಗೆ ಅಧ್ಯಕ್ಷರನ್ನು ನಿಯಮಿಸಬೇಕು. ಬಕದಂತೆ ಮನಸ್ಸಿನಲ್ಲಿರುವ ಉದ್ದೇಶ

ಗಳನ್ನು ಕುರಿತು ಚಿಂತಿಸುತ್ತ ಹೊಂಚಿನೋಡುತ್ತಿರಬೇಕು; ಸಿಂಹದಂತೆ ಪರಾಕ್ರಮವನ್ನು ತೋರಬೇಕು; ತೋಳನಂತೆ ಕೊಲ್ಲಬೇಕು; ಮೊಲದಂತೆ ತಪ್ಪಿಸಿಕೊಳ್ಳಬೇಕು. ಸಾಮದಾನಭೇದದಂಡಗಳೆಂಬ ಚತುರುಪಾಯಗಳನ್ನುಪಯೋಗಿಸಿ ಶತ್ರುಗಳನ್ನು ಗೆಲ್ಲಬೇಕು; ಸಂಪಾದಿಸಿದ ರಾಜ್ಯದಲ್ಲಿ ಗ್ರಾಮಗಳಿಗೂ ಗ್ರಾಮ ಸಮೂಹಗಳಿಗೂ ಅಧಿಪತಿಗಳನ್ನು ಗೊತ್ತುಮಾಡಬೇಕು; ಗೊತ್ತಾದಂತೆ ತೆರಿಗೆ ಸುಂಕಗಳನ್ನು ಗ್ರಹಿಸಬೇಕು; ಭೃತ್ಯಸೇವಕ ಜನರಿಗೆ ತಕ್ಕ ತಕ್ಕ ವೇತನಗಳನ್ನು ಕೊಡಿಸಬೇಕು; ಗೋಪ್ಯಸ್ಥಾನದಲ್ಲಿ ನಿಶ್ಶಬ್ದ ವೇಳೆಯಲ್ಲಿ ಏಕಾಂತವಾಗಿ ಕಾರ್ಯರೀತಿಗಳನ್ನು ಚಿಂತಿಸಬೇಕು; ಆತ್ಮಪೋಷಣೆಯ ವಿಷಯದಲ್ಲಿ ಜಾಗರೂಕನಾಗಿರಬೇಕು; ಸಭೆಯಲ್ಲಿ ಕುಳಿತು ವ್ಯವಹಾರಗಳನ್ನು ವಿಚಾರಿಸಬೇಕು; ಶಾಸ್ತ್ರವಿಹಿತವಾದಂತೆ ಅಪರಾಧಿಗಳಿಗೆ ದಂಡವನ್ನು ವಿಧಿಸಬೇಕು''—ಎಂಬಿವೇ ಮೊದಲಾದುವು ಮನುಶಾಸನಗಳು.

ವ್ಯವಹಾರ ನಿರ್ಣಯ ಕ್ರಮಗಳು—ಎಂದರೆ ವಾದಿ ಪ್ರತಿವಾದಿಗಳ ಹೇಳಿಕೆಯನ್ನು ಪರೀಕ್ಷಿಸುವ ಬಗೆ, ಸಾಕ್ಷಿಗಳನ್ನು ಪರೀಕ್ಷಿಸುವ ಬಗೆ, ಅಪರಾಧಗಳ ವಿವರಗಳು, ಅವಕ್ಕೆ ತಕ್ಕ ಶಿಕ್ಷೆಗಳು, ಇತ್ಯಾದಿಗಳೆಲ್ಲವೂ—ಮನುಧರ್ಮಶಾಸ್ತ್ರದಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿವೆ. ಮೇಲಿನ ಉಪದೇಶಗಳೂ ನಿಯಮಗಳೂ ಬೃಹಸ್ಪತಿ, ಉಶನ, ಯಾಜ್ಞವಲ್ಕ್ಯ ಮೊದಲಾದ ಇತರ ಮಹರ್ಷಿಗಳ ಸ್ಮೃತಿಗಳಲ್ಲಿಯೂ ಕಾಣಬರುತ್ತವೆ. ಕೋಟೆಗಳನ್ನು ಕಟ್ಟುವ ರೀತಿಯೂ, ಸೈನ್ಯವನ್ನು ಸಜ್ಜುಗೊಳಿಸುವ ರೀತಿಯೂ, ಗೂಢಚಾರರಿಂದ ಕೆಲಸ ತೆಗೆದುಕೊಳ್ಳುವ ವಿಧಾನವೂ, ಅಧಿಕಾರಿಗಳ ಮರ್ಮಗಳನ್ನು ಕಂಡುಹಿಡಿಯುವ ವಿಧಾನವೂ, ಶತ್ರುಗಳನ್ನು ದುರ್ಬಲರನ್ನಾಗಿ ಮಾಡುವ ಉಪಾಯಗಳೂ, ಮಿತ್ರರನ್ನು ಸಂಪಾದಿಸಿಕೊಳ್ಳುವ ಉಪಾಯಗಳೂ, ಭಂಡಾರವನ್ನು ಅಭಿವೃದ್ಧಿಪಡಿಸಿಕೊಳ್ಳುವ ಏರ್ಪಾಟುಗಳೂ, ಪ್ರಜೆಗಳನ್ನು ಹದ್ದಿನಲ್ಲಿಟ್ಟುಕೊಂಡಿರುವ ಏರ್ಪಾಟುಗಳೂ ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ವಿವರವಾಗಿ ಬೋಧಿಸಲ್ಪಟ್ಟಿವೆ. ನಮ್ಮ ಪ್ರಕೃತ ಪ್ರಸಂಗಕ್ಕೆ ಆ ವಿಷಯಗಳು ಹೆಚ್ಚಾಗಿ ಬೇಕಾದುವಲ್ಲ. ನಮಗೆ ಉಪಯುಕ್ತವಾದ ಅಂಶವನ್ನು ಸ್ಮಾರ್ತಶಿರೋ

ಮಣಿಭೂತರಾದ ಮನುಗಳೇ ಸಂಗ್ರಹವಾಗಿ ಎರಡು ಮೂರು ಶ್ಲೋಕಗಳಲ್ಲಿ ತಿಳಿಸಿರುತ್ತಾರೆ:—

ಶುಚಿನಾ ಸತ್ಯಸಂಧೇನ ಯಥಾ ಶಾಸ್ತ್ರಾನುಸಾರಿಣಾ |
ಪ್ರಣೇತುಂ ಶಕ್ಯತೇ ದಂಡಃ ಸುಸಹಾಯೇನ ಧೀಮತಾ ||
ಸೋಽಸಹಾಯೇನ ಮೂಢೇನ ಲುಬ್ಧೇನಾಕೃತಬುದ್ಧಿನಾ |
ನಶಕ್ಯೋ ನ್ಯಾಯತೋ ನೇತುಂ ಸಕ್ತೇನ ವಿಷಯೇಷು ಚ ||
ಮೌಲಾನ್ ಶಾಸ್ತ್ರವಿದಃ ಶೂರಾನ್ ಲಬ್ಧಲಕ್ಷಾನ್ ಕುಲೋದ್ಗತಾನ್ |
ಸಚಿವಾನ್ ಸಪ್ತಚಾಷ್ಟೌ ವಾ ಪ್ರಕುರ್ವೀತ ಪರೀಕ್ಷಿತಾನ್ ||
ನಿತ್ಯಂ ತಸ್ಮಿನ್ ಸಮಾಶ್ವಸ್ತಃ ಸರ್ವ ಕಾರ್ಯಾಣಿ ನಿಕ್ಷಿಪೇತ್ |
ತೇನ ಸಾರ್ಧಂ ವಿನಿಶ್ಚಿತ್ಯ ತತಃ ಕರ್ಮ ಸಮಾರಭೇತ್ ||

ಪರಿಶುದ್ಧನೂ, ಸತ್ಯಸಂಧನೂ, ಶಾಸ್ತ್ರಗಳನ್ನನುಸರಿಸಿ ನಡೆಯುವವನೂ, ಒಳ್ಳೆಯ ಮಂತ್ರಿಗಳ[14] ಸಹಾಯವುಳ್ಳವನೂ ಆದ ರಾಜನು (ರಾಜ) ದಂಡವನ್ನು ಪ್ರಯೋಗಿಸಲು ಅರ್ಹನಾಗುವನು.

ಮಂತ್ರಿಗಳ ಸಹಾಯವಿಲ್ಲದವನೂ, ಮೂಢನೂ, ಲೋಭಿಯೂ, ಅಸಂಸ್ಕೃತ ಬುದ್ಧಿಯುಳ್ಳವನೂ (ಅಥವಾ ನಿಶ್ಚಯ ಬುದ್ಧಿಯಿಲ್ಲದವನೂ), ವಿಷಯಾಸಕ್ತನೂ ಆದ ರಾಜನಿಂದ ದಂಡಾಧಿಕಾರವು ನ್ಯಾಯವಾಗಿ ನಡೆಯಲಾರದು.

ವಂಶಪಾರಂಪರ್ಯವಾಗಿ ತಿಳಿದವರೂ, ಶಾಸ್ತ್ರಜ್ಞರೂ, ಧೈರ್ಯಶಾಲಿಗಳೂ, ಸರಿಯಾದ ಗುರಿಯುಳ್ಳವರೂ, ಒಳ್ಳೆಯ ಕುಲದಲ್ಲಿ ಹುಟ್ಟಿದವರೂ, ಯೋಗ್ಯತಾ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದವರೂ ಆದ ಏಳು ಅಥವಾ ಎಂಟು ಮಂದಿಯನ್ನು ಮಂತ್ರಿಗಳನ್ನಾಗಿ ನಿಯಮಿಸಿಕೊಳ್ಳಬೇಕು.

ಅವರಲ್ಲಿ ಯಾವಾಗಲೂ ನಂಬಿಕೆಯನ್ನಿಟ್ಟವನಾಗಿ, ಎಲ್ಲ ಕಾರ್ಯಗಳಿಗೂ ಅವರನ್ನು ನಿಯಮಿಸಬೇಕು ; ಅವರೊಡನೆ ಆಲೋಚಿಸಿ ನಿಶ್ಚಯ ಮಾಡಿದ ಬಳಿಕ ಕೆಲಸವನ್ನಾರಂಭಿಸಬೇಕು.

ಈ ಮೇಲಿನ ವಿವರಣೆಯಿಂದ ಹೊರಪಡುವ ಅಭಿಪ್ರಾಯಗಳಿಷ್ಟು—

---

14 "ಸುಸಹಾಯೇನ" ಎಂಬುದಕ್ಕೆ "ಮಂತ್ರಿಗಳ" ಎಂಬ ಅರ್ಥ ಕುಲ್ಲೂಕಭಟ್ಟ ವಿರಚಿತವಾಗಿ ಪ್ರಸಿದ್ಧವಾದ "ಮನ್ವರ್ಥಮುಕ್ತಾವಳಿ" ಎಂಬ ವ್ಯಾಖ್ಯಾನದ್ದು.

(೧) ರಾಜನು ಸೂಕ್ಷ್ಮಬುದ್ಧಿಯುಳ್ಳವನೂ, ವಿದ್ಯಾವಂತನೂ ಆಗಿರಬೇಕು ;

(೨) ಅವನು ವಾಙ್ನಿಯಮ ಮನೋನಿಯಮಗಳುಳ್ಳವನೂ, ಉದಾರಿಯೂ ಆಗಿರಬೇಕು ;

(೩) ಅವನು ಶಾಸ್ತ್ರದಂತೆ—ಎಂದರೆ ಸರ್ವಸಾಮಾನ್ಯವಾದ ಧರ್ಮಕ್ಕೂ ರಾಜ್ಯದ ವ್ಯವಸ್ಥೆಗೂ ಅಧೀನನಾಗಿ—ನಡೆಯಬೇಕು ;

(೪) ಎಲ್ಲ ಕೆಲಸಗಳನ್ನೂ ಅವನು ಯೋಗ್ಯರಾದ ಮಂತ್ರಿಗಳ ಆಲೋಚನೆಯಂತೆ ಅವರ ದ್ವಾರಾ ನಡೆಯಿಸಬೇಕು. ಮಂತ್ರಿಗಳಿಲ್ಲದೆ ರಾಜ್ಯವನ್ನಾಳಲಾಗದು.

## ಪಾಶ್ಚಾತ್ಯ ಮತ

ಆಂಗ್ಲೇಯ ರಾಜ್ಯವ್ಯವಸ್ಥೆಯ ಮರ್ಮಗಳನ್ನು ಬಲ್ಲವರು ನಿಬಂಧಿಸಿರುವ ರಾಜನೀತಿಯೂ ಇಷ್ಟೇ ಅಲ್ಲದೆ ಬೇರೆಯಲ್ಲ. ಅವರಲ್ಲಿ ಪ್ರಖ್ಯಾತನಾದ ವಾಲ್ಟರ್ ಬೇಜಟ್ (Walter Bagehot) ಎಂಬಾತನು[15] ಹೀಗೆ ಅಭಿಪ್ರಾಯಪಟ್ಟಿರುವನು :—

"ಪ್ರತಿಯೊಂದು ಸಂಸ್ಥೆಗೂ ಸ್ವಲ್ಪ ಹೆಚ್ಚು ಕಡಮೆ ಎರಡು ವಿಭಾಗಗಳುಂಟು : ಒಂದು ಭಾಗವು ಆಕರ್ಷಕವಾದುದು ; ಇನ್ನೊಂದು ಪರಿಣಾಮಕಾರಿಯಾದುದು. ಮೊದಲನೆಯದು ಆ ಸಂಸ್ಥೆಯ ವಿಷಯದಲ್ಲಿ ಜನರಿಗೆ ಉತ್ಸಾಹ ವಿಶ್ವಾಸಗಳನ್ನು ಹುಟ್ಟಿಸುವುದು ; ಎರಡನೆಯದು ಆ ಉತ್ಸಾಹ ವಿಶ್ವಾಸಗಳಿಂದ ಅದಕ್ಕೆ ಬಂದ ಶಕ್ತಿಯನ್ನು ಸಾರ್ಥಕಪಡಿಸುವುದು. ಮೊದಲನೆಯದು ಗೌರವ ಸಂಪಾದಕವಾದುದು ; ಎರಡನೆಯದು ಫಲಕಾರಿಯಾದುದು. ಉದಾಹರಣೆ :—ಸೈನ್ಯದ ಧ್ವಜವೂ ವಾದ್ಯವಿಶೇಷಗಳೂ ವೇಷಾಡಂಬರಗಳೂ ಜನರಿಗೆ ವೀರಾವೇಶವನ್ನುಂಟುಮಾಡತಕ್ಕವು ; ಸೈನಿಕರ ಕತ್ತಿಗಳೂ ತುಪಾಕಿಗಳೂ ಶತ್ರುಗಳನ್ನು ಸಂಹರಿಸ

---

[15] ಸ್ಥಳಸಂಕೋಚ ಕಾರಣದಿಂದ ಮೂಲಗ್ರಂಥದ ಇಂಗ್ಲಿಷ್ ವಾಕ್ಯಗಳನ್ನಿಲ್ಲಿ ಕೊಟ್ಟಿಲ್ಲ. ನಾವು ಕೊಟ್ಟಿರುವುದು ಭಾವಾನುವಾದ ; ತರ್ಜುಮೆಯಲ್ಲ.

ತಕ್ಕುವು. "ಶತ್ರುಗಳನ್ನು ಗೆಲ್ಲಲು ಆಯುಧ ಶಸ್ತ್ರಗಳೇ ಸಾಕು; ಧ್ವಜ ನಗಾರಿಗಳು ಬೇಕಿಲ್ಲ"—ಎಂದು ಹೇಳಲಾಗದು; ಏಕೆಂದರೆ ಆಯುಧಗಳನ್ನು ಪ್ರಯೋಗಿಸುವುದಕ್ಕೆ ಯೋಧರು ಬೇಕು; ಅವರು ನಿಶಾನಿ ರಣಭೇರಿಗಳಿಲ್ಲದಿದ್ದರೆ ದೊರೆಯಲಾರರು. ಸೇನೆ ಹುಟ್ಟುವುದಕ್ಕೆ ಮುಂಚೆ ಆಯುಧಗಳಿದ್ದರೇನು, ಇಲ್ಲದಿದ್ದರೇನು? ಅವುಗಳ ಕೆಲಸವೇನಿದ್ದರೂ ಸೇನೆಯೊಂದು ನಿಂತಮೇಲೆ ತಾನೇ? ಹಾಗೆಯೇ ರಾಜ್ಯವೆಂಬ ಮಹಾಸಂಸ್ಥೆಯ ವಿಷಯದಲ್ಲಿ ಪ್ರಜೆಗಳ ವಿಶ್ವಾಸ ಶ್ರದ್ಧೆಗಳನ್ನು ಹುಟ್ಟಿಸತಕ್ಕುದು ರಾಜಪದವಿ; ಅದರಿಂದ ಸಂಪಾದಿತವಾದ ಶಕ್ತಿಯನ್ನು ಪ್ರಯೋಗಮಾಡತಕ್ಕುದು ಸರ್ಕಾರ. ರಾಜನು ರಾಜ್ಯಕ್ಕೆ ಮುಖ್ಯವಾಗಿ ಗೌರವಸಂಪಾದಕವಾದ ಭಾಗ; ಉಳಿದ ಅಧಿಕಾರಿವರ್ಗವು ಕಾರ್ಯಕಾರಿಯಾದ ಭಾಗ."

ಇಷ್ಟೇ ಅಲ್ಲ.

"ಸರಾಜಕ (ಮಾನಾರ್ಕಿ) ಪ್ರಭುತ್ವವು ಬಲವಾಗಿ ನಿಂತಿರುವುದಕ್ಕೆ ಅನೇಕ ಕಾರಣಗಳುಂಟು. ಅವುಗಳಲ್ಲಿ ಮೊದಲನೆಯದು ಅದರ ಸುಲಭ ಗ್ರಾಹ್ಯತೆ. ಜನಸಾಮಾನ್ಯಕ್ಕೆ ರಾಜನ ಪ್ರಭುತ್ವವೆಂಬುದು ಅರ್ಥವಾಗುತ್ತದೆ; ಇತರ ಬಗೆಯ (ರಾಜನಿಲ್ಲದ) ಪ್ರಭುತ್ವವು ಅರ್ಥವಾಗುವುದಿಲ್ಲ. ರಾಜ್ಯವ್ಯವಸ್ಥೆಯ ಸೂಕ್ಷ್ಮ ವಿವರಗಳು, ಅನೇಕ ಮಂದಿ ಸದಸ್ಯರನ್ನೊಳಗೊಂಡಿರುವ ಪ್ರಜಾಸಭೆಯ ಕಾರ್ಯಕಲಾಪ, ಅದರಲ್ಲಿ ಕಕ್ಷಿ ಪ್ರತಿಕಕ್ಷಿಗಳ ಹೊಡೆದಾಟ, ಕಣ್ಣಿಗೆ ಕಾಣಬಾರದಂತೆ ಆಗುವ ಜನವಾಕ್ಯೋತ್ಪತ್ತಿ—ಇವುಗಳನ್ನೆಲ್ಲ ಸರಿಯಾಗಿ ತಿಳಿದುಕೊಳ್ಳುವುದು ಕಷ್ಟ; ತಪ್ಪಾಗಿ ತಿಳಿಯುವುದು ಸುಲಭ. ಆದರೆ ಒಬ್ಬನೇ ಒಬ್ಬ ರಾಜನ ಇಷ್ಟದಂತೆ ನಡೆಯುವ ಕಾರ್ಯ—ಒಬ್ಬನೇ ಒಬ್ಬನ ಮನಸ್ಸಿನಿಂದ ಹೊರಡುವ ಆಜ್ಞೆ—ಇವುಗಳನ್ನು ಯಾರಾದರೂ ಸುಲಭವಾಗಿ ತಿಳಿದುಕೊಳ್ಳಬಹುದು; ಯಾರೂ ಅದನ್ನು ಮರೆಯಲಾಗುವುದಿಲ್ಲ. ಹಿಂದೆ ಒಂದು ಕಾಲದಲ್ಲಿ ಫ್ರಾನ್ಸು ದೇಶದ ಜನರನ್ನು ಕುರಿತು "ನಿಮ್ಮನ್ನು ನೆಪೋಲಿಯನ್ ದೊರೆ ಆಳಬೇಕೋ ಅಥವಾ ಒಂದು ಪ್ರಜಾಸಭೆಯು ಆಳಬೇಕೋ?" ಎಂದು ಕೇಳಿದಾಗ, ಅವರು, "ನಾವು ತಿಳಿಯಲಾಗುವ ಒಬ್ಬಾತನು ನಮ್ಮನ್ನು ಆಳಲಿ; ನಾವು ತಿಳಿಯಲಾಗದ ಅನೇಕ ಮಂದಿಯ ಆಳಿಕೆ ನಮಗೆ ಬೇಡ" ಎಂದು ಹೇಳಿದರು. . . . ಪ್ರಜಾರಾಷ್ಟ್ರದ ವ್ಯವಸ್ಥೆಯ ಸಂಗತಿಗಳು ತಿಳಿವಳಿಕೆಗೆ ಬರುವುದು ಕಷ್ಟಸಾಧ್ಯ; ಸಾಂಕುಶ ರಾಜನಿರುವ ರಾಷ್ಟ್ರದಲ್ಲಿಯಾದರೋ, ಸುಲಭಗ್ರಾಹ್ಯವಾದ ಸಂಗತಿಯೂ ಒಂದಿರುತ್ತದೆ. ವಿಶೇಷಜ್ಞರಲ್ಲದ ಬಹುಮಂದಿಗೋಸ್ಕರ ಒಂದು ಸ್ಥೂಲ ವಿಷಯವೂ, ವಿಚಾರಪರರಾದ ಸ್ವಲ್ಪ

ಮಂದಿಗೋಸ್ಕರ ಅನೇಕ ಸೂಕ್ಷ್ಮತತ್ತ್ವ ನಿಬಂಧನೆಗಳೂ—ಎರಡೂ ನಮ್ಮ ರಾಜ್ಯವ್ಯವಸ್ಥೆಯಲ್ಲಿರುತ್ತವೆ. ಪ್ರತ್ಯಕ್ಷವಾಗಿ ಕಾಣುವ ರಾಜನೇ ಆ ಸ್ಥೂಲ ವಿಷಯ; ಕಾಯಿದೆ ಕಟ್ಟುಪಾಡುಗಳಲ್ಲಡಗಿರುವ ರಾಜ್ಯ ವ್ಯವಸ್ಥಾ ನಿಯಮಗಳೂ ತತ್ಸಂಬಂಧವಾದ ಪ್ರಜಾ ಸಂಸ್ಥೆಗಳೂ ಆ ಸೂಕ್ಷ್ಮ ವಿಷಯಗಳು.

"ಅದಲ್ಲದೆ ರಾಜನು ವಂಶಾನುಕ್ರಮದಿಂದ ಪದವಿಗೆ ಬರತಕ್ಕವನಾದಕಾರಣ, ಸಿಂಹಾಸನಕ್ಕೆ ಅಧಿಕಾರಿಯಾದದ್ದು ಒಂದು ಮನೆತನ ಎಂಬ ಭಾವನೆಯಲ್ಲಿಯೇ ಒಂದು ಸ್ವಾರಸ್ಯವಿದೆ. ಆ ಭಾವನೆಯು ದೊರೆತನವನ್ನು ಸಾಮಾನ್ಯ ಸಂಸಾರಗಳ ಅಂತಸ್ತಿಗೆ ತಂದು ತೋರಿಸುತ್ತದೆ. ಅರಮನೆಯಲ್ಲೊಂದು ಮದುವೆಯಾದರೆ ಅದು ದೇಶಕ್ಕೆಲ್ಲ ಸಂಬಂಧಪಟ್ಟ ಸಂಭ್ರಮವಾಗುವುದು. ಇದು ಸ್ವಾಭಾವಿಕವೇ ಹೊರತು ಬೇರೆಯಲ್ಲ. ದೇಶದ ಪ್ರಜೆಯಲ್ಲಿ ಅರ್ಧವಾದ ಸ್ತ್ರೀಲೋಕಕ್ಕೆ ಮಂತ್ರಿಮಂಡಲದ ವಿಷಯದಲ್ಲಿರುವ ಆದರಕ್ಕಿಂತ ಆ ಮದುವೆಯ ವಿಷಯದಲ್ಲಿ ಅಕ್ಕರೆ ಐವತ್ತು ಪಾಲು ಹೆಚ್ಚು. ರಾಜಕುಮಾರನ (ಅಥವಾ ರಾಜಕುಮಾರಿಯ) ವಿವಾಹವೆಂಬುದು ಎಲ್ಲ ಕುಟುಂಬಗಳಲ್ಲಿಯೂ ಸಾಮಾನ್ಯವಾಗಿ ನಡೆಯುವ ಒಂದು ಸಂಗತಿಯ ಅತಿಶಯರೂಪವೇ ಹೊರತು ಬೇರೆಯಲ್ಲ. ಆ ಉತ್ಸವಕ್ಕೂ ರಾಜ್ಯವಿಚಾರಕ್ಕೂ ಪ್ರತ್ಯಕ್ಷವಾಗಿ ಸಂಬಂಧವಿಲ್ಲದಿರಬಹುದು; ಆದರೆ ಅಂತಹ ಸಂಗತಿಗಳು ಪ್ರಜೆಗಳ ಮನಸ್ಸನ್ನಾಕರ್ಷಿಸಿ ಅವರ ಮಾತುಕಥೆಗಳಿಗೆ ವಿಷಯಗಳಾಗುವುವು. ಮುಖ್ಯವಾಗಿ, ರಾಜನಾಳುವ ರಾಷ್ಟ್ರದಲ್ಲಿ ಪ್ರಜೆಗಳ ಲಕ್ಷ್ಯವೆಲ್ಲವೂ ಸ್ವಾರಸ್ಯವುಳ್ಳ ಕೆಲಸಗಳನ್ನು ಮಾಡುವ ಒಬ್ಬಾತನಲ್ಲಿ ಕೂಡಿರುತ್ತವೆ. ಕೇವಲ ಪ್ರಜಾಪ್ರತಿನಿಧಿಗಳು ಮಾತ್ರವೇ ಆಳುತ್ತಿರುವ ರಾಷ್ಟ್ರದಲ್ಲಿ ಪ್ರಜೆಯ ದೃಷ್ಟಿಯು ಸ್ವಾರಸ್ಯವಿಲ್ಲದ ಕೆಲಸಗಳನ್ನು ಮಾಡುತ್ತಿರುವ ಹತ್ತಾರು ಮಂದಿಯಲ್ಲಿ ಚದರಿರುತ್ತದೆ. ಆದಕಾರಣ ಎಷ್ಟು ಕಾಲ ಮನುಷ್ಯ ಸ್ವಭಾವದಲ್ಲಿ ತರ್ಕಬುದ್ಧಿಗಿಂತ ಅಭಿಮಾನೋತ್ಸಾಹ ರೂಪವಾದ ಮನೋವೇಗವೇ ಪ್ರಬಲಿಸಿರುವುದೋ ಅಷ್ಟು ಕಾಲ ಸರಾಜಕ ಪ್ರಭುತ್ವವೇ ಪ್ರಬಲವಾಗಿರುವುದು; ಏಕೆಂದರೆ ಜನರ ಮನೋಭಾವಗಳನ್ನುದ್ರೇಕಪಡಿಸುವ ಶಕ್ತಿಯು ರಾಜಪದವಿಗೇ ಹೆಚ್ಚಾಗಿರುವುದು.

"ರಾಜನನ್ನಿಟ್ಟುಕೊಂಡಿರುವ ರಾಜ್ಯವ್ಯವಸ್ಥೆಯು ಇತರ ಬಗೆಯ, ವ್ಯವಸ್ಥೆಗಿಂತ ಉತ್ತಮವೆಂಬುದಕ್ಕೆ ಇನ್ನೂ ಕೆಲವು ಕಾರಣಗಳುಂಟು. ರಾಜಭಕ್ತಿಯು ಮತಧರ್ಮಕ್ಕೆ ಸಂಬಂಧಪಟ್ಟದ್ದು. ಪ್ರಜಾಸಭೆಗಳು,

ಕಾನೂನುಗಳು, ವರ್ತಮಾನ ಪತ್ರಿಕೆಗಳು—ಇವೆಲ್ಲಾ ಮಾನುಷ ಕಾರ್ಯಗಳೆಂದೂ ರಾಜಪದವಿ ಮಾತ್ರ ದೇವಾಂಶ ಸಂಭೂತವಾದುದೆಂದೂ ಸಾಮಾನ್ಯ ಜನರು ತಿಳಿದುಕೊಂಡಿರುತ್ತಾರೆ. ಜನರು ಸ್ವತಃ ರಾಜನಿಗೆ ವಿಧೇಯತೆಯನ್ನು ತೋರಲು ಸಿದ್ಧರಾಗಿರುವವರಾದ ಕಾರಣ ಅಂಥಾ ರಾಜಪದವಿಯಿರುವುದರಿಂದ ಸರ್ಕಾರಕ್ಕೆ ಹೆಚ್ಚು ಬಲವುಂಟಾಗುತ್ತದೆ.

"ರಾಜಾಸ್ಥಾನವು ಸಮಾಜದ ಆಚಾರ ವ್ಯವಹಾರಗಳಿಗೆ ಮೂಲಸ್ಥಾನವಾಗಿರುವುದು. ಶ್ರೀಮಂತರೂ ವಿದ್ಯಾವಂತರೂ ರಸಿಕರೂ ಅಲ್ಲಿ ಹೆಚ್ಚಾಗಿ ಸೇರುವರು. ಅವರು ತೋರುವ ನಡೆನುಡಿಗಳು ಇತರರಿಗೆಲ್ಲ ಮೇಲುಪಂಕ್ತಿಯಾಗುವುವು. ರಾಜಸನ್ನಿಧಿಯಲ್ಲಿರತಕ್ಕ ದೊಡ್ಡಮನುಷ್ಯರು ರಾಜರ ರೀತಿ ಪದ್ಧತಿಗಳನ್ನನುಕರಿಸುವರು ; ಆ ದೊಡ್ಡಮನುಷ್ಯರನ್ನು ಸಾಮಾನ್ಯ ಜನರು ಅನುಕರಿಸುವುದು ಸ್ವಾಭಾವಿಕ. ಹೀಗೆ ರಾಜನು ಜನರ ಸಾಮಾಜಿಕ ವೃತ್ತಿಗೂ ಕಾರಣಕರ್ತನಾಗುವನು.

"ರಾಜನನ್ನು ಜನರು ತಮ್ಮ ನಯನೀತಿಗಳಿಗೂ ಸಹ ಮಾದರಿಯಾಗಿ ಇಟ್ಟುಕೊಳ್ಳುವುದು ಸಾಮಾನ್ಯವಾಗಿದೆ.[16] ಆಳುತ್ತಿರುವ ರಾಜನು ನೀತಿವಂತನೂ ಗುಣಶೀಲನೂ ಆಗಿದ್ದರೆ ಪ್ರಜಾಸಾಮಾನ್ಯವು ಅವನನ್ನು ಕೊಂಡಾಡುವುದು ಸ್ವಾಭಾವಿಕವಷ್ಟೆ? ಹೀಗೆ ಪ್ರಜೆಗಳ ಸೌಜನ್ಯಾಭಿಮಾನವನ್ನು ದೊರೆಯು ಹೊರಕ್ಕೆ ತರಬಲ್ಲನಾದ ಕಾರಣ ಅವನೂ ಪ್ರಜಾನೀತಿಗೆ ಒಬ್ಬ ಸಹಾಯಕನೆಂದು ಹೇಳಬಹುದು. ಆದರೆ ರಾಜಪದವಿಯಲ್ಲಿರತಕ್ಕವರನ್ನು ನೀತಿಯಿಂದ ತಪ್ಪಿಸಬಲ್ಲ ದುರ್ವಿಷಯಗಳು ಎಷ್ಟೋ ಅವರ ಸುತ್ತುಮುತ್ತಯಾವಾಗಲೂ ಇರುತ್ತವೆ. ಆದಕಾರಣ ರಾಜವೈಭವದಲ್ಲಿರುವವರು ಸುಗುಣ ಸೌಶೀಲ್ಯಗಳಿಗೆ ಆದರ್ಶಪ್ರಾಯರಾಗಿರುವುದು ಸಾಮಾನ್ಯವಲ್ಲ. ಆದರೂ ಅವರು ಹಾಗಿದ್ದರೆ ಅದರಿಂದ ಲೋಕದ ನೀತಿಗೆ ಇತರರಿಂದಾಗಲಾರದಷ್ಟು ಹೆಚ್ಚಾಗಿ ಸಹಾಯವಾಗುವುದು."

ರಾಜನಿರುವುದರಿಂದಾಗುವ ಪ್ರಯೋಜನಗಳಲ್ಲಿ ಇನ್ನೂ ಒಂದೇನೆಂದರೆ, ಆತನು ಅಧಿಕಾರಿವರ್ಗಕ್ಕೆಲ್ಲ ಒಂದು ಬಗೆಯ ಆವರಣದಂತೆ ಇರುವವನು. ರಾಜ್ಯಾಧಿಕಾರವನ್ನು ಪ್ರಯೋಗಿಸ

---

[16] ನಮ್ಮಲ್ಲಿ "ಯಥಾ ರಾಜಾ ತಥಾ ಪ್ರಜಾ" ಎಂಬ ವಚನವೂ, ಆ ಭಾವವನ್ನು ಮನಸ್ಸಿನಲ್ಲಿಟ್ಟುಕೊಂಡೇ ಶ್ರೀರಾಮಚಂದ್ರನು ಗರ್ಭವತಿಯಾದ ಸೀತಾದೇವಿಯನ್ನು ಕಾಡಿಗೆ ಕಳುಹಿಸಬೇಕಾಯಿತೆಂಬ ಕಥೆಯೂ ಪ್ರಸಿದ್ಧವಾಗಿವೆ.

ತಕ್ಕವರು—ಎಂದರೆ ಮಂತ್ರಿಗಳು,—ಬದಲಾಯಿಸಬೇಕಾದ ಕಾಲ ದಲ್ಲಿ, ರಾಜನ ಮರೆಯಲ್ಲಿ ಅವರು ಬದಲಾಯಿಸುವರಾದದ್ದರಿಂದ, ಅವರ ಆ ಬದಲಾವಣೆಯು ಸಾಮಾನ್ಯ ಜನರ ಗಮನಕ್ಕೆ ವಿಶೇಷವಾಗಿ ಬಾರದಂತೆ ನಡೆಯುತ್ತದೆ. ಇದು ರಾಜ್ಯಕ್ಕೆ ಒಳ್ಳೆಯದು; ಹೇಗೆಂದರೆ, ರಾಜನೆಂಬೊಂದು ಬದಲಾಯಿಸ ದಿರುವ ಮುಖ್ಯವಸ್ತುವಿಲ್ಲದೆ ಹೋಗಿ, ರಾಜ್ಯಾಧಿಕಾರಿಗಳ ಬದಲಾವಣೆಯು ಮಾತ್ರ ಪದೇ ಪದೇ ನಡೆಯುತ್ತಿದ್ದರೆ, ಆಗ ಜನರಿಗೆ ತಮ್ಮ ಸರ್ಕಾರದ ವಿಷಯದಲ್ಲಿ ನಂಬುಗೆ ಕಡಿಮೆಯಾ ದೀತು. ರಾಜಪದವಿಯೊಂದು ರಾಜ್ಯಯಂತ್ರದಲ್ಲಿ ಸ್ಥಿರವಾಗಿ ನಿಂತಿರತಕ್ಕ ಅಂಗ. ಮಂತ್ರಿಗಳೂ ಇತರ ಅಧಿಕಾರಿಗಳೂ ಪ್ರಜಾ ಪ್ರತಿನಿಧಿಗಳೂ ಸಹ ಆಗಾಗ ಬೇರೆ ಬೇರೆ ಬಂದುಹೋಗುತ್ತಿರು ವವರು; ರಾಜನು ಮಾತ್ರ ವಂಶಪಾರಂಪರ್ಯದಿಂದ ಒಂದೇ ರೀತಿ ನಿಂತಿರುವವನು. ಆದದ್ದರಿಂದ ರಾಜ್ಯವ್ಯವಸ್ಥೆಗೆ ದೃಢತೆ ಯನ್ನೂ ಸ್ತಿಮಿತತೆಯನ್ನೂ ಉಂಟುಮಾಡಿಕೊಡುವ ಏಕೈಕ ಮುಖ್ಯ ಲಕ್ಷಣ ರಾಜಪದವಿ.

## ರಾಜನ ತಾಟಸ್ಥ್ಯ

ರಾಜನಿಂದಾಗಬೇಕಾಗಿರುವ ಅಥವಾ ಆಗಬಹುದಾದ, ಪ್ರಯೋಜನಗಳು ಎಂತಹುವೆಂದು ಹೇಳಿರುವುದರಿಂದಲೇ ರಾಜ ನಲ್ಲಿ ಎಂತಹ ಗುಣಶೀಲಗಳಿರಬೇಕೆಂಬುದನ್ನು ಸೂಚಿಸಿದಂತಾ ಯಿತು. ರಾಜ್ಯಭಾರ ನಿರ್ವಹಣದಲ್ಲಿ ಆತನು ಹೇಗೆ ನಡೆದು ಕೊಳ್ಳಬೇಕೆಂಬುದನ್ನು ತಿಳಿಯಲು ಬೇಜಟ್‌ರವರು ಹೇಳಿರುವ ಇನ್ನೂ ಕೆಲವು ವಾಕ್ಯಗಳನ್ನು ಗಮನಿಸಿ ಓದಬೇಕಾಗಿದೆ:—

"ರಾಜ್ಯವ್ಯವಸ್ಥಾಬದ್ಧನಾದ—ಎಂದರೆ ರಾಜ್ಯದ ಕಟ್ಟುಪಾಡಿಗೆ ಒಳ ಪಟ್ಟವನಾದ,—ರಾಜನ ಬುದ್ಧಿಶಾಲಿತನದ ಅತಿಮುಖ್ಯ ಲಕ್ಷಣವು ವಿವೇಕ ಪೂರ್ವಕವಾದ ತಾಟಸ್ಥ್ಯ. ಬುದ್ಧಿವಂತನಾಗಿ, ತಾನು ಬುದ್ಧಿವಂತನೆಂಬ ನಂಬಿಕೆಯುಳ್ಳ ರಾಜನು, ಆ ತನ್ನ ಬುದ್ಧಿವಂತಿಕೆಯನ್ನು ಉಪಯೋಗಕ್ಕೆ

ತಾರದೆ, ತಟಸ್ಥನಾಗಿ—ಎಂದರೆ ಯಾವ ಕೆಲಸಕ್ಕೂ ಕೈಹಾಕದವನಾಗಿ—ಇರುವುದರಲ್ಲಿ ಆ ಬುದ್ಧಿಯನ್ನು ಏಕೆ ಕಳೆಯಬೇಕೆಂದರೆ, ಪ್ರಜಾಪ್ರತಿನಿಧಿ ಸಭೆಗೆ ಸ್ವಕರ್ತವ್ಯ ಬುದ್ಧಿಯನ್ನು ಉಂಟುಮಾಡಿಕೊಡುವುದಕ್ಕೋಸ್ಕರ. ಪ್ರಜಾಪ್ರತಿನಿಧಿ ಸಭೆಯು ತನ್ನ ಜವಾಬ್ದಾರಿಯನ್ನು ತಿಳಿದುಕೊಂಡು, ಮಂತ್ರಿವರ್ಗದ ನಡತೆಯನ್ನು ತಿದ್ದುವ ಭಾರವನ್ನು ತಾನೇ ವಹಿಸಬೇಕು. ರಾಜ್ಯಕಾರ್ಯನಿರ್ವಹಣಕ್ಕೆಲ್ಲವೂ ರಾಜನೇ ಜವಾಬುದಾರನೆಂದು ಆ ಸಭೆಯು ತಿಳಿಯುವಂತೆ ಮಾಡಿದರೆ, ಅದು ಯಾರಿಗೂ ಉತ್ತರ ಹೇಳಬೇಕಾದ ಆವಶ್ಯಕತೆಯಿಲ್ಲದೆ, ಮನಸ್ವೀ ಮಾತನಾಡಿ ಕಾಲಹರಣಮಾಡುವ ಸ್ಥಿತಿಗೆ ಬಂದೀತು.''

ರಾಜನು ತಟಸ್ಥನು; ಆತನು ರಾಜ್ಯಾಧಿಕಾರಿವರ್ಗದಲ್ಲಿ ಅಥವಾ ಮಂತ್ರಿಮಂಡಲದಲ್ಲಿ ಸೇರಿದವನಲ್ಲ; ಮಂತ್ರಿಮಂಡಲವನ್ನೆದುರಿಸುವ ಪ್ರಜಾಪ್ರಮುಖವರ್ಗದಲ್ಲಿಯೂ ಆತನು ಸೇರನು; ಪ್ರಜಾಪ್ರತಿನಿಧಿ ಸಭೆಯೊಳಗಿರುವ ಕಕ್ಷಿ ಪ್ರತಿಕಕ್ಷಿಗಳಿಗೂ ಆತನು ಸಂಬಂಧಪಟ್ಟವನಲ್ಲ. ಆತನ ಸ್ಥಾನವು ಎಲ್ಲರಿಗಿಂತ ಪ್ರತ್ಯೇಕವಾದುದು; ಎಲ್ಲರಿಗೂ ಮೇಲಿನದು, ದೂರವಾದದ್ದು. ಆತನು ಕೇವಲ ಸಾಕ್ಷಿ. ಇತರರೆಲ್ಲರೂ ವಿವಿಧ ವ್ಯಾಪಾರಗಳನ್ನು ಮಾಡಿ ಹೋರಾಡುತ್ತಿರುವರು; ಆತನು ಯಾವ ಪಂಗಡಕ್ಕೂ ಸೇರದೆ, ಅವರು ಮಾಡುವುದನ್ನೆಲ್ಲ ನೋಡುತ್ತಿದ್ದು, ಅವಶ್ಯಬಿದ್ದಾಗ ಮಾತ್ರ (ಜಡ್ಜಿ) ನ್ಯಾಯಾಧೀಶನಂತೆ ನಿಷ್ಪಕ್ಷಪಾತವಾದ ತೀರ್ಮಾನವನ್ನು ಕೊಡುವವನು.

ಸಾಮಾನ್ಯವಾಗಿ ರಾಜನು ನಿಷ್ಕ್ರಿಯನು. ಆತನು ಪ್ರತ್ಯಕ್ಷವಾಗಿ ಕೆಲಸಮಾಡತಕ್ಕದ್ದು ಮೂರು ವಿಶೇಷ ಸಮಯಗಳಲ್ಲಿ ಮಾತ್ರ:—(೧) ಮಂತ್ರಿವರ್ಗವು ಪ್ರಜಾಪಕ್ಷವನ್ನೆದುರುಹಾಕಿಕೊಳ್ಳುವಂತೆ ತೋರಿದಾಗ ಅದಕ್ಕೆ ಎಚ್ಚರ ಕೊಡುವುದು; (೨) ಮಂತ್ರಿಮಂಡಲವು ಕಾರ್ಯರೀತಿಯಲ್ಲಿ ಪೇಚಾಡುತ್ತಿರುವಂತೆ, ಅಥವಾ ತಪ್ಪುಹೆಜ್ಜೆಹಾಕುವಂತೆ, ತೋರಿದಾಗ ಅದಕ್ಕೆ ಯುಕ್ತ ಮಾರ್ಗವನ್ನು ಸೂಚಿಸುವುದು; (೩) ಮಂತ್ರಿಸಂಪುಟವು ಯಾವ ಕಾರಣದಿಂದಲಾದರೂ ಅಧಿಕಾರವನ್ನು

ಬಿಡಬೇಕಾದಾಗ ಅದರ ಕೈಯಿಂದ ಕಾರ್ಯ ಸೂತ್ರಗಳನ್ನು ತೆಗೆದುಕೊಂಡು, ಬೇರೊಂದು ಮಂತ್ರಿ ಸಂಪುಟ ಏರ್ಪಡುವ ವರೆಗೂ ಆ ಸೂತ್ರಗಳನ್ನು ಹಿಡಿದುಕೊಂಡಿದ್ದು, ಆ ಹೊಸ ಮಂತ್ರಿ ಸಂಪುಟವು ಬಂದೊಡನೆಯೆ ಆ ಸೂತ್ರಗಳನ್ನು ಅದರ ಕೈಗೆ ಕೊಡುವುದು—ಈ ಮೂರು ಸಂದರ್ಭಗಳ ವಿನಾ ಮಿಕ್ಕಂತೆ ರಾಜನು ಸ್ವಂತವಾಗಿ ಯಾವ ಕೆಲಸವನ್ನೂ ಪ್ರತ್ಯಕ್ಷವಾಗಿ ಮಾಡತಕ್ಕವನಲ್ಲ.

## ರಾಜನು ನಿರ್ದೋಷಿ

ಈ ಅಭಿಪ್ರಾಯಕ್ಕನುಸಾರವಾಗಿ ಆಂಗ್ಲೇಯ ರಾಜ್ಯ ವ್ಯವಸ್ಥೆಯಲ್ಲಿ "ರಾಜನು ಎಂದಿಗೂ ತಪ್ಪುಮಾಡಲಾರನು" ಎಂಬ ಸಂಕೇತವೊಂದನ್ನು ಮಾಡಿಕೊಂಡಿದ್ದಾರೆ. ಇದಕ್ಕೆ ಕಾರಣ ವೇನೆಂದರೆ,—ಯಾವಾಗ ರಾಜನು ಇತರ ರಾಜ್ಯಾಧಿಕಾರಿ ಗಳಂತೆಯೇ ತಪ್ಪುಮಾಡುವುದು ಸಾಧ್ಯವೆಂದು ಹೇಳುತ್ತೇವೋ ಆಗ ಆತನ ಮಹತ್ತ್ವಕ್ಕೆ ಲೋಪಬಂದ ಹಾಗಾಯಿತು. ಇತರ ರಂತೆ ರಾಜನೂ ಪ್ರಮಾದವಶನಾಗಬಹುದಾದರೆ ಆತನ ವಿಶೇಷ ವೇನು? ಹೀಗೆ ಯಾವಾಗ ರಾಜಪದವಿಯು ಇತರ ಅಧಿಕಾರ ಪದವಿಗಳ ಮಟ್ಟಕ್ಕೇ ಇಳಿಯುವುದೋ, ಆಗ ಅದಕ್ಕೆ ಮೇಲೆ ವಿವರಿಸಲ್ಪಟ್ಟಿರುವ ಮಹಿಮಾತಿಶಯಗಳೆಲ್ಲ ನಷ್ಟವಾಗಿ, ಅದರಿಂದ ರಾಜ್ಯಕ್ಕಾಗಬೇಕಾಗಿರುವ ಉಪಕಾರವು ಆಗಲಾರದೆ ಹೋಗು ವುದು. ರಾಜನ ಮೇಲೆ ತಪ್ಪು ಹೊರಿಸಿದರೆ ರಾಜ್ಯವೆಂಬ ಕಟ್ಟಡದ ನಡುಗಂಬವನ್ನೇ ಸಡಿಲಿಸಿದಂತಾಗುವುದು. ಅದಕ್ಕೆ ಬದಲಾಗಿ, ರಾಜನನ್ನು ಬಿಟ್ಟುಬಿಟ್ಟು, ಎಲ್ಲ ರಾಜಕಾರ್ಯಗಳ ಜವಾಬ್ದಾರಿ ಯನ್ನೂ ಮಂತ್ರಿಗಳ ಮೇಲೆಯೇ ವಹಿಸಿದರೆ ರಾಜ್ಯದ ಮೂಲಾಧಾರಕ್ಕೆ ಅಪಾಯವಿಲ್ಲದೆ ಹೋಗಿ, ಪ್ರಜೆಗಳಿಗೆ ಉತ್ತರ ಹೇಳಲು ಶಿಕ್ಷಾರ್ಹರಾದ ಕೆಲವರು ನಿಲ್ಲುವರು. ರಾಜ್ಯದಲ್ಲಿ ನಡೆಯುವ ಎಲ್ಲ ರಾಜಕೀಯ ಕಾರ್ಯಗಳೂ ರಾಜನ ಹೆಸರಿನಲ್ಲಿ,

-ಆತನ ಮುದ್ರಿಕೆಯ ಪ್ರಭಾವದಿಂದ—ನಡೆದರೂ, ಅದರ
ೀರ್ತಿ ಅಪಕೀರ್ತಿಗಳು ಮಂತ್ರಿಮಂಡಲಕ್ಕೇ ಸಲ್ಲತಕ್ಕವು.
್ರಜೆಗಳ ಆಕ್ಷೇಪಣೆ ಅಸಮಾಧಾನಗಳಿಗೆ ಮಂತ್ರಿಗಳು ಗುರಿ
ಯಾಗಬೇಕೇ ಹೊರತು ರಾಜನು ಗುರಿಯಾಗತಕ್ಕವನಲ್ಲ.
ೀಗೆಂದು ಆಂಗ್ಲೇಯರು ಬಹುಕಾಲದಿಂದ ಒಂದು ಕಟ್ಟಲೆ
ಯನ್ನು ನಿರ್ಮಿಸಿಕೊಂಡಿರುವರು. ಆದುದರಿಂದಲೇ ಬೇಜಟ್
ಂಡಿತನು ಹೀಗೆ ಹೇಳಿರುವನು—

" ರಾಜನು (ಪ್ರಜೆಗಳಿಗೆ) ಅನುಗ್ರಹಮಾಡತಕ್ಕವನಾಗಿರುವಾಗ, ಆತನಿಗೆ
ಾವ ಸೋಂಕೂ ಇಲ್ಲದಿರುವುದೇ ಅತ್ಯುತ್ತಮ. ಆತನು ಕೆಟ್ಟುದನ್ನು
ಾಡಲಾರದವನೆಂಬುದು ಪ್ರತ್ಯಕ್ಷ ಸಿದ್ಧವಾಗಿರಬೇಕು. ಆತನನ್ನು ಅತಿ
ವ್ರವಾದ ಪರೀಕ್ಷೆಗೆ ಗುರಿಪಡಿಸಬಾರದು. ಆತನು (ಇತರರಿಂದ) ದೂರ
ಾಗಿಯೂ ಏಕಾಂತನಾಗಿಯೂ ಇರಬೇಕು. ರಾಜಪದವಿಯ ಕರ್ತವ್ಯಗಳು
ಢವಾಗಿ ನಡೆಯತಕ್ಕುವು. ರಾಜಪದವಿಯು ಆಜ್ಞೆ ಕೊಡತಕ್ಕುದು ;
ಯಾಸಪಡತಕ್ಕುದಲ್ಲ. ಸಾಮಾನ್ಯವಾಗಿ ಅದು ಒಂದು ರಹಸ್ಯದಂತೆ ಮರೆ
ಲ್ಲಿರುವುದು ; ಕೆಲವು ಸಂದರ್ಭಗಳಲ್ಲಿ ಅದು ಉತ್ಸವಮೂರ್ತಿಯಂತೆ
ೂರಹೊರಟು ಮೆರೆಯುವುದು ; ಆದರೆ ಯಾವಾಗಲೂ ಅದು ವಿವಾದ
ಷಯವಾಗದು. ರಾಷ್ಟ್ರವು ಅಥವಾ ಜನಪದವು ಪಕ್ಷಿಗಳಾಗಿ ಒಂಗಡ
ಾಗಬಹುದು ; ಕಿರೀಟವು ಮಾತ್ರ ಯಾವ ಪಕ್ಷಿಯದೂ ಅಲ್ಲ. ರಾಜ್ಯವ್ಯವ
ಾರಗಳಿಂದ ಅದು ದೂರವಾಗಿರುವ ಕಾರಣದಿಂದ, ಅದಕ್ಕೆ ರಾಜ್ಯದಲ್ಲಾರೂ
ರೋಧಿಗಳಾಗರು ; ಯಾರೂ ಅದನ್ನು ನಿಂದಿಸರು ; ಅದರ ಮರ್ಮವು
ಾಧೆಯಿಲ್ಲದೆ ಇರುವುದು ; ಪರಸ್ಪರ ವಿರೋಧಿಗಳಾದ ಎಲ್ಲ ಪಕ್ಷಿಗಳ
ಭಿಮಾನಕ್ಕೂ ಅದು ಒಂದೇ ರೀತಿ ಪಾತ್ರವಾಗಿರುವುದು. ಹೀಗೆ ಅದು
ಾಷ್ಟ್ರದ ಎಲ್ಲ ಅಂಗಾಂಗಗಳ ಒಕ್ಕಟ್ಟಿಗೆ ಹೆಗ್ಗುರುತಾಗಿರುವುದು."

## ರಾಜನ ಕರ್ತವ್ಯಗಳು

ಹೀಗೆ " ರಾಜನು ಸರ್ವದಾ ಸ್ವತಃ ನಿರ್ಲಿಪ್ತನು, ನಿಷ್ಕ್ರಿ
ಯನು, ನಿರ್ದೋಷಿ " ಎಂಬ ಸಂಕೇತವನ್ನು ಆಂಗ್ಲೇಯ ರಾಜ್ಯ
ಂತ್ರ ನಿಪುಣರು ತಮ್ಮ ರಾಜ್ಯವ್ಯವಸ್ಥೆಯ ಮೂಲಸೂತ್ರ
ನ್ನಾಗಿ ಇಟ್ಟುಕೊಂಡಿರುವುದರ ತಾತ್ಪರ್ಯವು ರಾಜನನ್ನು

ಸೋಮಾರಿಯನ್ನಾಗಿಯೂ ಉತ್ತರಭಾರವಿಲ್ಲದವನನ್ನಾಗಿಯೂ ಮಾಡಬೇಕೆಂಬುದಲ್ಲ. ಅದಕ್ಕೆ ಬದಲಾಗಿ, ಮಂತ್ರಿಗಳನ್ನು ಉತ್ತರಭಾರವಾಹಿಗಳನ್ನಾಗಿಯೂ, ಶಿಕ್ಷಾರ್ಹರನ್ನಾಗಿಯೂ, ಪ್ರಜಾಭಯವುಳ್ಳವರನ್ನಾಗಿಯೂ ಮಾಡಬೇಕೆಂಬುದೇ ಆ ಸಂಕೇತದ ಉದ್ದೇಶ. ರಾಜನಾದರೋ ವಸ್ತುತಃ ಉದ್ಯೋಗ ಶೀಲನಾಗಿಯೇ ಇರಬೇಕು. ಆತನು ಮಾಡಬೇಕಾದ ಕಾರ್ಯ ಗಳು ಅನೇಕ; ಅವು ಅತಿಗಹನವಾದುವು, ಅತಿ ಮುಖ್ಯ ವಾದುವು. ಈ ವಿಷಯದಲ್ಲಿ ಬೇಜಟ್‌ರವರ ಅಭಿಪ್ರಾಯವು ಹೀಗಿರುವುದು :—

ರಾಜ್ಯವ್ಯವಸ್ಥಾ ನಿಯಂತ್ರಿತನಾದ ರಾಜನಿಂದಾಗುವ ಅತಿ ಮುಖ್ಯ ಪ್ರಯೋಜನವು ಆತನ ಪದವಿಯ ಶಾಶ್ವತತೆಯಿಂದ ಉಂಟಾಗತಕ್ಕುದು. ಈ ಶಾಶ್ವತತೆಯ ದೆಸೆಯಿಂದ ಅನೇಕ ದೊಡ್ಡ ದೊಡ್ಡ ವ್ಯವಹಾರಗಳ ಸೂಕ್ಷ್ಮಾಂಶಗಳ ವಿಚಾರವನ್ನೆಲ್ಲ ಆಮೂಲಾಗ್ರವಾಗಿ ಸ್ವತಃ ತಿಳಿದು ಕೊಳ್ಳುವ ಅವಕಾಶಗಳು ರಾಜನೊಬ್ಬನಿಗೆ ಮಾತ್ರ ಇರುತ್ತವೆ. ಆ ಅವಕಾಶ ಗಳನ್ನು ಆತನು ಉಪಯೋಗಪಡಿಸಿಕೊಳ್ಳಬೇಕು.

ದೀರ್ಘಕಾಲ ಆಳಿರುವ ಕುಶಲಮತಿಯಾದ ರಾಜನಿಗೆ ತನ್ನ ಮಂತ್ರಿ ಗಳು ಸಂಪಾದಿಸಲಾಗದಷ್ಟು ಅನುಭವವು ದೊರೆತಿರುತ್ತದೆ. ಆತನು ಅವರನ್ನು ಕುರಿತು ಹೀಗೆ ಹೇಳಬಹುದು—"ಹಿಂದೆ ಆ ವರ್ಷ ಆ ಸಂದ ರ್ಭದಲ್ಲಿ ಹೇಗಾಗಿತ್ತು, ನೋಡಿದಿರಾ ? ನೀವು ಈಗ ಸೂಚಿಸುವ ದಾರಿ ಯಲ್ಲಿ ಹೋದರೆ ಪುನಃ ಅದೇ ತೊಂದರೆಗಳೇ ಬರಬಹುದಲ್ಲವೆ ? ಅದಕ್ಕಿಂತ ಹತ್ತು ವರ್ಷದ ಹಿಂದೆ ಬೇರೊಂದು ಸಂದರ್ಭದಲ್ಲಿ ಯಾವ ರೀತಿ ನಡೆದರು ? ಅದರಿಂದ ಆಗ ಅನುಕೂಲವಾಯಿತೆಂದು ನನಗೆ ಜ್ಞಾಪಕವಿದೆ. ಬಹುಶಃ ನೀವು ಅದನ್ನು ಮರೆತಿರಬಹುದು. ಆ ಕಾಲದ ಲೆಕ್ಕಪತ್ರಗಳನ್ನು ತೆಗೆದು ನೋಡಿ ಮುಂದಿನ ವಿಧಾನವನ್ನು ನಿಷ್ಕರ್ಷಿಸುವುದು ಒಳ್ಳೆಯದು. ಆಗಿನ ಸಂಗತಿಗಳನ್ನು ಬಲ್ಲ ಹಳಬರೊಡನೆ ಮಾತನಾಡಿದಿರಾ ? ಅವರೇನಾ ದರೂ ಒಳ್ಳೆಯ ಸಲಹೆಗಳನ್ನು ಕೊಟ್ಟಾರು." ಹೀಗೆಂದು ರಾಜನು ಮಂತ್ರಿ ಗಳಿಗೆ ಹೇಳಬಹುದು. ಇತರರೂ ಹಾಗೆ ಹೇಳಬಹುದು ; ಆದರೆ ಮಂತ್ರಿಗಳು ಇತರರ ಮಾತನ್ನು ನಿರಾಕರಿಸುವಂತೆ ರಾಜನ ಮಾತನ್ನು ತೆಗೆದುಹಾಕ ಲಾಗುವುದಿಲ್ಲ. ರಾಜನಲ್ಲಿ ಮೇಲೆ ವರ್ಣಿಸಿದ ರೀತಿಯ, ವಿವರಿಸಲಾಗದ,

ಒಂದು ಸೂಕ್ಷ್ಮ ಮಹಿಮೆ ಇರುತ್ತದೆ. ಆತನು ಎಲ್ಲ ಪ್ರಜೆಗಳ ಗೌರವ ವಿಶ್ವಾಸಗಳಿಗೂ ಪಾತ್ರನಾದವನು. ಆದುದರಿಂದ ಆತನ ಮಾತಿಗೆ ಅವರು ಕಿವಿಗೊಟ್ಟು, ಆತನ ಸಲಹೆಯನ್ನು ಮನಸ್ಸಿಗೆ ತೆಗೆದುಕೊಂಡು, ತಾವು ಮೊದಲು ಗೊತ್ತುಮಾಡಿಕೊಂಡಿದ್ದ ಏರ್ಪಾಟುಗಳನ್ನು ಮತ್ತೊಂದುಸಲ ಸಾವಧಾನವಾಗಿ ಪರ್ಯಾಲೋಚಿಸುವರು.

ರಾಜನು ಈ ರೀತಿ ಹೇಳಬಹುದು:—"ನಿಮ್ಮ ಮಂತ್ರಿತ್ವದಲ್ಲಿ ನಡೆಯುವ ಎಲ್ಲ ರಾಜ್ಯಕಾರ್ಯಗಳ ವಿಷಯದಲ್ಲಿಯೂ ಉತ್ತರವಾದಿತ್ವವು ನಿಮ್ಮದು. ನಿಮಗೆ ಯಾವುದು ಯುಕ್ತವೆಂದು ತೋರುವುದೋ ಅದು ನಡೆಯಲೇ ಬೇಕು. ನಿಮ್ಮ ನಿಶ್ಚಯವು ಯಾವುದೋ ಅದನ್ನು ನಾನು ಸಂಪೂರ್ಣವಾಗಿ ಅನುಮೋದಿಸಲೇ ಬೇಕು. ಆದರೆ ಕೆಲವು ಕಾರಣಗಳಿಂದ ನಿಮ್ಮ ಈ ತೀರ್ಮಾನವು ನನಗೆ ಸರಿತೋರುತ್ತಿಲ್ಲ; ಮತ್ತು ಆ ರೀತಿ ಆಲೋಚನೆ ಮಾಡಿದರೆ ಬೇರೊಂದು ದಾರಿಯೇ ಸರಿಯೆಂದು ತೋರುತ್ತದೆ. ನಿಮಗೆ ಪ್ರತಿಹೇಳುವುದು ನನ್ನ ಉದ್ದೇಶವಲ್ಲ; ಪ್ರತಿ ಹೇಳುವುದು ನನ್ನ ಕರ್ತವ್ಯವಲ್ಲ; ಆದರೆ ನಾನು ಎಚ್ಚರಮಾತ್ರ ಕೊಡಬೇಕಾಗಿದೆ, ಎಚ್ಚರಿಸುವುದು ನನಗಿರುವ ಕರ್ತವ್ಯ." ಈ ರೀತಿ ದೊರೆಯು ಗಂಭೀರವಾಗಿ ಮಾತನಾಡಿದರೆ, ಆತನ ಮಾತು ಪ್ರಾಯಶಃ ವ್ಯರ್ಥವಾಗದು. ಅದರಿಂದ ಮಂತ್ರಿಯ ಮಾರ್ಗವು ಪೂರ್ತಿ ಬೇರೆಯಾಗದೆ ಇರಬಹುದು; ಆದರೂ ಅವನ ಮನಸ್ಸು ಪುನರಾಲೋಚನೆ ಮಾಡದೆ ಇರದು.

ರಾಜನೂ ಮಂತ್ರಿಯೂ ಸೇರಿದಾಗ ನಡೆಯುವ ಸಂಭಾಷಣೆಯು ಇತರರು ಸೇರುವಾಗ ನಡೆಯುವ ವಾಗ್ವಾದದಂತೆ ಬರಿಯ ಚರ್ಚೆಯೆಂದು ಭಾವಿಸಲಾಗದು. ಸಾಮಾನ್ಯ ಪ್ರಜೆಯೊಬ್ಬನು ತನ್ನ ಸ್ವಂತ ಕೊಠಡಿಯಲ್ಲಿ ಕುಳಿತು ತನ್ನ ಸ್ನೇಹಿತನೊಡನೆ ಮಾತನಾಡುವ ರೀತಿಯಲ್ಲಿ, ರಾಜನು ಮಂತ್ರಿಯ ಕೊಠಡಿಯಲ್ಲಿ ಕುಳಿತು ಮಾತನಾಡಲಾಗುವುದಿಲ್ಲ. ಸ್ನೇಹಿತನೊಡನೆ ಇರುವ ಸಲಿಗೆಯೂ ಬಳಕೆಯೂ ಮಂತ್ರಿಯೊಡನೆ ಇರಲಾರದು. ಅದೇ ರೀತಿ ಮಂತ್ರಿಯಾದವನು ಇತರರೊಡನೆ ಮಾತನಾಡುವಾಗ ತೋರುವ ದರ್ಪವನ್ನೂ ಧಾರಾಳವನ್ನೂ ರಾಜಸನ್ನಿಧಿಯಲ್ಲಿ ತೋರಲಾಗುವುದಿಲ್ಲ. ಇತರರು ಮಂತ್ರಿಗೆ ತೋರುವ ನಯಭಯವಿನಯಗಳನ್ನು ಮಂತ್ರಿಯು ರಾಜನಿಗೆ ತೋರುವನು. ರಾಜಸಾನ್ನಿಧ್ಯದ ಮಹಿಮೆಗೆ ಇಂಗ್ಲೆಂಡ್ ದೇಶದ ಚರಿತ್ರೆಯಲ್ಲಿ ಪ್ರಸಿದ್ಧವಾದ ನಿದರ್ಶನವು ಲಾರ್ಡ್ ಚಾತಮ್ (Chatham) ಎಂಬ ಮುಖ್ಯಮಂತ್ರಿಯದು. ಆತನು ಮಹಾ ಉದ್ಧತನಾದ ಮನುಷ್ಯ. ಆತನು ರಾಜನ ಇಷ್ಟಕ್ಕೆ ವಿರೋಧವಾಗಿ ಅಧಿಕಾರವನ್ನು ಪಡೆದವನು. ಆತನೇ

ಮೊದಲನೆಯ ಪ್ರಜಾಪಕ್ಷದ ಮಂತ್ರಿ. ಆತನು ಯಾರನ್ನೂ ಲಕ್ಷ್ಯದಲ್ಲಿಡ ತಕ್ಕವನಲ್ಲವೆಂದು ಜನರು ನಂಬಿದ್ದರು. ಅಂತಹ ದರ್ಪಶಾಲಿಯು ಮಂತ್ರಿಯಾದಮೇಲೆ, ರಾಜಸಾವಿಾಪ್ಯಕ್ಕೆ ಬಂದಕೂಡಲೆ ಒಂದು ಬಗೆಯ ಮಾಟಕ್ಕೆ ಒಳಗಾಗಿ, ಅತ್ಯಂತ ನಮ್ರನಾಗಿ ನಡೆದುಕೊಳ್ಳುತ್ತಿದ್ದನು. "ದರ್ಬಾರುಗಳಲ್ಲಿ ಅವನು ರಾಜರ ಮುಂದೆ ತಲೆಬಾಗಿಸಿದಾಗ, ಅವನ ಗರುಡಮೂಗು ಅವನ ಕಾಲುಗಳ ನಡುವೆ ಕಾಣಿಸುತ್ತದೆ"—ಎಂದು ಆತನ ವಿಷಯದಲ್ಲಿ ಒಬ್ಬ ವಿನೋದಗಾರನು ಹೇಳಿದನಂತೆ. ಚಾತಮನು ದೊರೆಯ ಮಂಚದ ಪಕ್ಕದಲ್ಲಿ ಮೊಣಕಾಲೂರಿ ಕುಳಿತು ರಾಜ್ಯದ ವಿಷಯಗಳನ್ನು ಅರಿಕೆ ಮಾಡಿಕೊಳ್ಳುತ್ತಿದ್ದನು. ಹೀಗೆ ಮೊಣಕಾಲೂರಿರುವವನಿಗೂ ಮಂಚದ ಮೇಲೆ ವಿಶ್ರಮಿಸಿಕೊಳ್ಳುತ್ತಿರುವವನಿಗೂ ಸಮಾನತೆಯೆಲ್ಲಿಯದು? ಅದರಲ್ಲಿ ಒಬ್ಬನು ಹೇಳಿಕೊಳ್ಳತಕ್ಕವನು; ಮತ್ತೊಬ್ಬನು ಕೇಳಿ ಆಕ್ಷೇಪಿಸತಕ್ಕವನು.

ರಾಜ್ಯಕಾರ್ಯಗಳನ್ನು ಕುರಿತ ಜ್ಞಾನಕ್ಕೆ ರಾಜಮಾರ್ಗವಾವುದೂ ಇಲ್ಲ. ಅವುಗಳ ವಿವರಾಂಶಗಳು ವಿಸ್ತಾರವಾದವು, ಕ್ಲಿಷ್ಟವಾದವು, ಸೂಕ್ಷ್ಮವಾದವು, ವಿವಿಧವಾದವು. ರಾಜನು ಮಂತ್ರಿಗಳೊಡನೆ ಚರ್ಚೆಯಲ್ಲಿ ಸರಿತೂಗಬೇಕಾದರೆ ಅವರಿಗೆ ಸರಿಯಾಗಿ ತಾನೂ ಕೆಲಸ ಮಾಡಬೇಕು. ಅವರು ಕಾರ್ಯನಿರತರಾಗಿರುವಂತೆ ತಾನೂ ಕಾರ್ಯನಿರತನಾಗಿರಬೇಕು. ಆದರೆ ಒಂದು ಚೋದ್ಯವುಂಟು: ವ್ಯವಸ್ಥಾವಶನಾದ ರಾಜನು ಸುಖಲೋಲುಪನಾಗುವುದಕ್ಕೆ ಅನೇಕ ಪ್ರೋತ್ಸಾಹಗಳುಂಟು. ಕಾರ್ಯಾಸಕ್ತನಾಗಲು ಪ್ರೋತ್ಸಾಹಗಳಿರವು. ವ್ಯವಸ್ಥೆಗೆ ಸಿಕ್ಕದ ನಿರಂಕುಶನಾಗಿರುವ ರಾಜನಿಗೆ ಸುಖಲೋಲುಪನಾಗಲು ಮನಶ್ಶಾಂತಿಯಿರದು. ರಾಜ್ಯದ ಭಾರವೆಲ್ಲವೂ ಅವನ ತಲೆಯ ಮೇಲೆಯೇ ಹೊತ್ತಿರುವುದು. ಅವನು ಹೇಗಿರುವನೋ ಅವನ ಕೆಲಸಗಳೂ ಹಾಗಿರುವುವು. ಅವನು ಸುಖಾಸಕ್ತನಾಗಿ ಮೈಮರೆತರೆ ಅವನಿಗೇ ಅಪಾಯ. ಅದರಿಂದ ರಾಜ್ಯದ ಆಡಳಿತಗಳು ಕೆಟ್ಟುಹೋಗಿ, ಪ್ರಜೆಗಳ ದಂಗೆಗೆ ಕಾರಣವಾಗಬಹುದು. ಪ್ರಜೆಗಳು ದಂಗೆಯೆದ್ದರೆ ಅವನ ಪದವಿಯೇ ತಲೆಕೆಳಗಾಗುವುದು. ಅಥವಾ ಅವನ ಅಜಾಗರೂಕತೆಯಿಂದ ಅಧಿಕಾರಿವರ್ಗವು ಸಡಲಿ ದುರ್ಬಲವಾದರೆ, ಬಲಶಾಲಿಯಾದ ಪರರಾಜನೊಬ್ಬನು ದಂಡೆತ್ತಿಬಂದು ರಾಜ್ಯವನ್ನಾಕ್ರಮಿಸಬಹುದು. ಒಂಮ ವ್ಯವಸ್ಥೆಯಿಂದ ಸುರಕ್ಷಿತನಾಗಿರುವ ಸಾಂಕುಶರಾಜನಿಗೆ ಇಂಥಾ ಭೀತಿಯೊಂದೂ ಇಲ್ಲ. ಅವನು ಸ್ವಕರ್ತವ್ಯಗಳನ್ನು ಮರೆತರೂ ಆತನಿಗೇನೂ ಬಾಧೆಯಿಲ್ಲ. ಆತನ ಪದವಿ ಶಾಶ್ವತವಾದುದು; ಆತನ ವರಮಾನವು ಕಡಮೆಯಾಗುವುದಲ್ಲ; ಆತನ ಸುಖಪರವಶತೆಗೆ ಕುಂದುಬಾರದು. ಆತನೇಕೆ

ದುಡಿದು ಕೆಲಸಮಾಡಬೇಕು? ಕೆಲಸಮಾಡದಿದ್ದರೆ ಮಂತ್ರಿಗಳ ಮೇಲೆ ಆತನಿಗೆ ಹಿಡಿತ ತಪ್ಪುವುದೆಂಬುದು ನಿಜ. ಆದರೆ ಲೋಕದ ಭೋಗ್ಯವಸ್ತುಗಳೆಲ್ಲವೂ ಸುಲಭವಾಗಿ ಕೈಗೆ ಸಿಕ್ಕುತ್ತಿರುವಾಗ, ಪ್ರತ್ಯಕ್ಷವಾದ ಸುಖವನ್ನು ಬಿಟ್ಟು ಬಿಟ್ಟು, ಎಲ್ಲಿಯೋ ದೂರವಾಗಿ, ಕಣ್ಣಿಗೆ ಕಾಣದೆ, ಸ್ವಾರಸ್ಯವಿಲ್ಲದ ಸಾಮಾನ್ಯವಿಷಯಗಳಲ್ಲಿ ಮಾತ್ರ ಪ್ರಯುಕ್ತವಾಗುವ, ಅಲ್ಪಸ್ವಲ್ಪ ಶಕ್ತಿಗಾಗಿ ಪ್ರಯಾಸಪಡುವ ಬುದ್ಧಿಯು ಯುವಕನಾದ ರಾಜನಿಗಿರುವುದು ಸಾಧಾರಣ ವಲ್ಲ. ಅವನಿಗೆ ಒಳ್ಳೆಯ ಉದ್ದೇಶಗಳೇ ಇರಬಹುದು; ಅವನು— "ಬರುವ ವರ್ಷ ನಾನು ಈ ಕಾಗದಗಳನ್ನೆಲ್ಲ ಓದುವೆನು; ಆ ವಿಚಾರ ಗಳನ್ನೆಲ್ಲ ಪರೀಕ್ಷಿಸುವೆನು; ಹೆಂಗಸರೊಡನೆ ಮಾತನಾಡೆನು" ಎಂದು ಹೇಳಿಕೊಳ್ಳುತ್ತಿರಬಹುದು. ಆದರೆ ಹೆಂಗಸರು ಅವನೊಡನೆ ಮಾತನಾಡು ತ್ತಲೇ ಇರುವರು. ಸೋಮಾರಿತನದ ಅನೇಕ ವಿಧಗಳ ಪೈಕಿ, ಒಳ್ಳೆಯ ಉದ್ದೇಶಗಳಿಂದ ಸವರಲ್ಪಟ್ಟ ಸೋಮಾರಿತನವೇ ಅತ್ಯಂತ ಹಟವುಳ್ಳದ್ದು.

ರಾಜನು ಚಿಕ್ಕಪ್ರಾಯದಲ್ಲಿ ಸಿಂಹಾಸನಕ್ಕೆ ಬಂದವನಾದರೆ ಆಗ ಆಗತಕ್ಕ ಕೇಡು ಇಂತಹುದು. ಆತನು ಮಧ್ಯಮವಯಸ್ಸಿನವನೋ ಮುದು ಕನೋ ಆದರೆ ಕೇಡು ಇನ್ನೂ ಹೆಚ್ಚು. ಕೆಲಸಮಾಡುವ ಅಭ್ಯಾಸವೇ ಅಂಥವನಿಗೆ ಇರುವುದಿಲ್ಲ. ಯೌವನವನ್ನೆಲ್ಲಾ ಲೋಲನಾಗಿ ಕಳೆದವನು ಮುಪ್ಪಿನಲ್ಲಿ ಕಾರ್ಯಶೀಲನಾಗುವುದು ಅಸಂಭವ. ರಾಜ್ಯವ್ಯವಸ್ಥಾ ವಿಹಿತನಾದ, ಎಂದರೆ ಸಾಂಕುಶಪ್ರಭುವಾದ, ರಾಜನಾಗಿರಲು ಎಂಥವನು ಅರ್ಹನೆಂದರೆ—'ಯಾರು ಚಿಕ್ಕವಯಸ್ಸಿನಲ್ಲಿ ಸಿಂಹಾಸನಕ್ಕೆ ಬಂದು, ಆ ಚಿಕ್ಕತನದಲ್ಲಿ ಸುಖಾಭಿಲಾಷೆಗೆ ವಶನಾಗದೆ, ಕಷ್ಟಪಟ್ಟು ಕೆಲಸಮಾಡಲು ಇಷ್ಟವುಳ್ಳವನಾಗಿರುವನೋ ಮತ್ತು ಯಾರು ಸ್ವಾಭಾವಿಕವಾಗಿ ವಿವೇಕಶಾಲಿ ಯಾಗಿರುವನೋ ಆತನು. ಭಗವಂತನು ಜನರಿಗೆ ಕೊಡುವ ವರಗಳಲ್ಲೆಲ್ಲಾ ಇಂತಹ ರಾಜನೇ ಬಹಳ ದೊಡ್ಡ ವರ; ಅದು ಹಾಗೆಯೇ ಬಹಳ ವಿರಳ ವಾದ (ಅಪರೂಪ) ವರವೂ ಹೌದು.'

ಆಂಗ್ಲೇಯ ರಾಜ್ಯತಂತ್ರಜ್ಞರ ಅಭಿಪ್ರಾಯವು ರಾಜಪದ ವಿಯ ವಿಷಯದಲ್ಲಿ ಈ ರೀತಿ ಇದೆ. ಅಲ್ಲಿಯೂ ಪೂರ್ವದಲ್ಲಿ ರಾಜರು ನಿರಂಕುಶರಾಗಿಯೇ ಇದ್ದರೆಂಬುದನ್ನೂ, ಆ ನಿರಂಕುಶ ತೆಯ ದುಷ್ಪರಿಣಾಮಗಳು ಪ್ರಜೆಗಳನ್ನು ರೇಗಿಸಿದ ಕಾರಣ

ಅವರು ರಾಜರಿಗೆ ಎದುರುಬಿದ್ದು, ತಮ್ಮ ಸ್ವಬಲದಿಂದ ರಾಜರನ್ನು ನಿರ್ಬಂಧಿಸಿ, ತಮ್ಮ ರಾಜ್ಯಕ್ಕೊಂದು ವ್ಯವಸ್ಥೆಯನ್ನು ಕಲ್ಪಿಸಿಕೊಂಡರೆಂಬುದನ್ನೂ, ಆ ವ್ಯವಸ್ಥೆಯು ಕಾಲಾನುಗುಣವಾಗಿ ಬೆಳೆಯುತ್ತ, ರಾಜರ ಸ್ವೇಚ್ಛಾವರ್ತನೆಗೆ ಪ್ರತಿಕೂಲವಾಗಿಯೂ, ಪ್ರಜಾಧಿಕಾರಕ್ಕೆ ಅನುಕೂಲವಾಗಿಯೂ ಶಾಸನ ಸಂಪ್ರದಾಯರೂಪದಲ್ಲಿ ನಡೆದುಬಂದಿದೆಯೆಂಬುದನ್ನೂ ಹಿಂದೆ ಸೂಕ್ಷ್ಮವಾಗಿ ಹೇಳಿದ್ದೇವೆ. ಆ ವ್ಯವಸ್ಥೆಗನುಸಾರವಾಗಿ, ರಾಜವಂಶದ ಸಿಂಹಾಸನಾಧಿಕಾರದ ಬಗೆಗೂ: ರಾಜರು ಮಂತ್ರಿ ಮೊದಲಾದ ಅಧಿಕಾರಿಗಳನ್ನು ನಿಯಮಿಸುವ ಬಗೆಗೂ; ರಾಜರು ಸ್ವತಃ ಪ್ರವರ್ತಿಸಬೇಕಾದ ಕುಟುಂಬದಲ್ಲಿಯ ವಿವಾಹಸಂಬಂಧಗಳು, ರಾಜರ ಮತ, ರಾಜರು ಪರರಾಜರೊಡನೆ ಬೆಳೆಸುವ ಪತ್ರ ಪ್ರಸಂಗ—ಇವೇ ಮೊದಲಾದ ಸ್ವಕೀಯ ವಿಷಯಗಳ ಬಗೆಗೂ ಸಹ, ಇಂಗ್ಲೆಂಡಿನಲ್ಲಿ ಖಂಡಿತವಾದ ನಿಯಮಗಳು ಏರ್ಪಟ್ಟಿವೆ. ಆ ನಿಯಮಗಳಲ್ಲಿ ಕೆಲವು ಲಿಖಿತವಾದ ಕಾನೂನು (ಎಂದರೆ ರಾಜ್ಯಶಾಸನ) ಗಳಲ್ಲಿರತಕ್ಕುವು; ಉಳಿದುವು ಅಲಿಖಿತಗಳಾದ ಮಾಮೂಲು ಪದ್ಧತಿ (ಕನ್ವೆನ್‌ಷನ್) ಗಳಿಂದ ಬಲಪಟ್ಟಿರತಕ್ಕುವು. ಈ ನಿಯಮಗಳ ಮುಖ್ಯ ತಾತ್ಪರ್ಯವು ರಾಜನನ್ನು ಪ್ರಜಾನುರಕ್ತನನ್ನಾಗಿಯೂ, ಪ್ರಜಾಧೀನರಾದ ಮಂತ್ರಿಗಳ ದ್ವಾರಾ ಪ್ರವರ್ತಿಸತಕ್ಕವನನ್ನಾಗಿಯೂ, ಹಾಗೆ ಪ್ರಜಾನುರಾಗಕ್ಕೆ ಅರ್ಹನನ್ನಾಗಿಯೂ ಮಾಡಬೇಕೆಂಬುದೇ. ಪ್ರಜಾಹಿತಕ್ಕಾಗಲಿ ದೇಶಕ್ಷೇಮಕ್ಕಾಗಲಿ ಸಂಬಂಧಪಟ್ಟ ಪ್ರತಿಯೊಂದು ವಿಷಯದಲ್ಲಿಯೂ ರಾಜರು ಹೀಗೆಯೇ ನಡೆಯಬೇಕೆಂಬ ಕಟ್ಟುಪಾಡು ಅಲ್ಲಿಯ ಕಾಯಿದೆ (ಲಾ) ಗಳಿಂದಲೂ ಸಂಪ್ರದಾಯಗಳಿಂದಲೂ ನಿಷ್ಕರ್ಷೆಯಾಗಿದೆ. ಈ ನಿಬಂಧನೆಗಳ ಅರ್ಥವನ್ನೆಲ್ಲ ವಿಚಾರಮಾಡಿ ನೋಡಿದರೆ, ಹಿಂದೆ ನಮ್ಮವರ ಮತದಿಂದ ರಾಜಗುಣಗಳ ವಿಷಯದಲ್ಲಿ ಹೊರಪಟ್ಟ ಅಭಿಪ್ರಾಯಗಳೇ ಆಂಗ್ಲೇಯ ರಾಜ್ಯವ್ಯವಸ್ಥೆಯ ಚರಿತ್ರೆಯಿಂದಲೂ ಹೊರಪಡುತ್ತವೆ.

(೧) ರಾಜನು ವಿವೇಕಿಯಾಗಿಯೂ ವಿಚಾರಪರನಾಗಿಯೂ ಇರಬೇಕು.

(೨) ಸುಖಲೋಲುಪನಾಗದೆ, ಪ್ರಜಾವತ್ಸಲನಾಗಿ, ಸುಗುಣಶಾಲಿಯಾಗಿರಬೇಕು.

(೩) ತನ್ನ ದೇಶದ ಅಥವಾ ಜನಪದದ ವ್ಯವಸ್ಥೆಗೆ—ಅಥವಾ ಧರ್ಮಕ್ಕೆ,—ಅಧೀನನಾಗಿರಬೇಕು.

(೪) ತಾನೇ ಯಾವ ಕೆಲಸಕ್ಕೂ ಕೈಹಾಕದೆ, ಎಲ್ಲ ರಾಜ್ಯ ಕಾರ್ಯಗಳನ್ನೂ ಮಂತ್ರಿಗಳಿಂದ ನಡೆಯಿಸುತ್ತಾ, ಉತ್ತರ ವಾದಿತ್ವದ (ಜವಾಬ್ದಾರಿಯ) ಭಾರವನ್ನು ಅವರೇ ವಹಿಸಲು ಬಿಡಬೇಕು.

ರಾಜ್ಯಯಂತ್ರದ ಜೀವಚಕ್ರಕ್ಕೆ ರಾಜನೇ ಅಕ್ಷವೆಂದು ಹಿಂದೆ ಹೇಳಿದೆವು. ಚಕ್ರದ ಅಚ್ಚಿಗೆ ಚಕ್ರಕ್ಕಿರುವಂತೆ ಹಲ್ಲಿರು ವುದಿಲ್ಲ; ಅದು ಕಡಿಯುವುದಿಲ್ಲ; ಕೊಯ್ಯುವುದಿಲ್ಲ; ಹೊರಕ್ಕೆ ಕಾಣುವುದಿಲ್ಲ; ಶಬ್ದಮಾಡುವುದಿಲ್ಲ. ಆದರೂ ಯಂತ್ರದ ಭಾಗಗಳನ್ನೆಲ್ಲ ತಮ್ಮ ತಮ್ಮ ಸ್ಥಾನಗಳಲ್ಲಿ ನಿಲ್ಲಿಸಿ, ಕೆಲಸ ಮಾಡಿಸಿ, ಸಾರ್ಥಕಪಡಿಸತಕ್ಕದ್ದು ಆ ಅಚ್ಚೇ ಅಲ್ಲವೆ?

# ೧೩. ರಾಜ್ಯದಲ್ಲಿ ಅಧ್ಯಕ್ಷನ ಸ್ಥಾನ

ಈ ಪ್ರಬಂಧದ ಈವರೆಗಿನ ಭಾಗವನ್ನು ಬರೆದಾಗ (೧೯೨೩ ರ ಸುಮಾರಿನಲ್ಲಿ) ಇಂಡಿಯದಲ್ಲಿ ಬ್ರಿಟಿಷರ ರಾಜ್ಯಭಾರ ನಡೆಯುತ್ತಿತ್ತು. ನಮ್ಮ ದೇಶದ ರಾಜ್ಯಸಂಸ್ಥೆಯಿಂದ ರಾಜನೆಂಬ ಅಂಗ ಕಳಚಿಹೋಗುವುದರ ಸೂಚನೆ ಆಗ ಇರಲಿಲ್ಲ. ನಮ್ಮ ರಾಜರನ್ನು ಇಂಗ್ಲೆಂಡಿನಲ್ಲಿರುವಂತೆ ಪ್ರಜಾಂಕುಶಕ್ಕೆ ಒಳಪಡಿಸಬೇಕೆಂಬ ಅಭಿಪ್ರಾಯವೇನೋ ಜನದಲ್ಲಿತ್ತು; ಆದರೆ ರಾಜತ್ವವೆಂಬ ಅಧಿಕಾರವನ್ನೇ ಅಳಿಸಿಹಾಕಬೇಕೆಂಬ ಆಲೋಚನೆ ಆಗಿಗೆ ತಲೆಯೆತ್ತಿರಲಿಲ್ಲ. ರಾಜನ ಸ್ವೇಚ್ಛಾಧಿಕಾರ ಬೇಡವಾಗಿತ್ತೇ ಹೊರತು ರಾಜನೇ ಬೇಡವೆನಿಸಿರಲಿಲ್ಲ. ಆದ್ದರಿಂದ ಹಿಂದಿನ ಪ್ರಕರಣಗಳಲ್ಲಿ ವರ್ಣಿತವಾಗಿರುವ ರಾಜ್ಯವ್ಯವಸ್ಥೆಯು ರಾಜನೆಂಬ ಕೇಂದ್ರ ಸ್ತಂಭವನ್ನವಲಂಬಿಸಿದ್ದು,—ರಾಜಸಹಿತವಾದದ್ದು,—ಆದರೆ ಸಾಂಕುಶ ರಾಜಕೀಯದ್ದು.

## ರಾಜನಿಲ್ಲದ ರಾಜ್ಯ

ಈಗ ಇಂಡಿಯವು ಸ್ವತಂತ್ರವಾಗಿ ಅಂಗೀಕರಿಸಿಕೊಂಡಿರುವುದು ರಾಜರಹಿತ ವ್ಯವಸ್ಥೆಯನ್ನು,—ಕೇವಲ (ರಿಪಬ್ಲಿಕ್) ಜನತಾ ರಾಷ್ಟ್ರಪದ್ಧತಿಯನ್ನು. ರಾಜ—"ರಾಜಪ್ರಮುಖ"—ಎನ್ನಿಸಿಕೊಂಡವರು ಈಗಲೂ ಏಳೆಂಟು ಮಂದಿ ಇಂಡಿಯದಲ್ಲಿದ್ದರೂ ಅವರ ಆ ಹೆಸರು ಉಪಚಾರ ಮಾತ್ರದ್ದು. ವಾಸ್ತವವಾಗಿ ಅವರಿಗಿರುವ ಅಧಿಕಾರ "ಗವರ್ನರು"ಗಳೆಂಬ ಮಾಂಡಲಿಕರ—ಅಂತರ್ಗತ ಸಂಸ್ಥಾನಗಳ ಮುಖ್ಯಸ್ಥರ—ಮಟ್ಟದ್ದು. ಅದು ಆ ರಾಜರುಗಳ ಸ್ವಸಂಸ್ಥಾನಗಳ ಒಳಗಡೆ ಕೂಡ ಹಿಂದಿನಷ್ಟು ಸಂಪೂರ್ಣವಾಗಿಲ್ಲ. ವಾಸ್ತವವಾಗಿ ಅವರು ರಾಷ್ಟ್ರಾಧ್ಯಕ್ಷ

ರಿಂದ ನಿಯಮಿತರಾದ ಇತರ ಕಾರುಬಾರಿಗಳಂತೆಯೇ ಎಂದು ಹೇಳಬಹುದು. ಸದ್ಯಕ್ಕೆ ಹೀಗೆ ಕುಂಠಿತವಾಗಿರುವ ಪ್ರಾದೇಶಿಕ ರಾಜತ್ವವು ಮುಂದೆ ಮುಂದೆ ಇನ್ನೂ ಹೆಚ್ಚಿನ ರೂಪ ವ್ಯತ್ಯಾಸ ಗಳನ್ನು ಪಡೆಯುವುದು ಅಸಂಭವವೆಂದು ಈಗ ಹೇಳುವಂತಿಲ್ಲ. ಅದು ಹೇಗಾದರಾಗಲಿ, ಒಟ್ಟು ಇಂಡಿಯದ ಪ್ರಸಕ್ತಿಯಲ್ಲಿ ಹಿಂದೆ "ರಾಜ"ಶಬ್ದವು ಪ್ರಯುಕ್ತವಾಗಿದ್ದ ಸ್ಥಳದಲ್ಲೆಲ್ಲ ಈ ಹೊತ್ತು "ಪ್ರಜೆ ಅಥವಾ" "ಪ್ರಜಾಧ್ಯಕ್ಷ" ಎಂಬ ಶಬ್ದವು ಯುಕ್ತವಾಗುತ್ತದೆ.

ನಮ್ಮ ಈ ರಾಜಪರಿತ್ಯಾಗ ಅನಿವಾರ್ಯವಾದದ್ದು. ನಮ್ಮ ಶಾಸ್ತ್ರಕಾರರೂ ಅರಿಸ್ಟೋಟಲನೂ ಹೇಳಿರುವಂತೆ, ಸಾಂಕುಶ ಸರಾಜಕವೇ ರಾಜ್ಯಪದ್ಧತಿಗಳಲ್ಲೆಲ್ಲಾ ಉತ್ಕೃಷ್ಟವಾದದ್ದೆಂದು ನಾವು ಒಪ್ಪಿಕೊಂಡರೂ, ಆ ಒಪ್ಪಿಕೆ ಇಂದು ತತ್ತ್ವದ ಮಾತಾ ದೀತೇ ಹೊರತು ಕಾರ್ಯದ ಮಾತಾಗಲಾರದು. ಏಕೆಂದರೆ ಯಾರನ್ನು ನಾವು ಈ ಹೊತ್ತು ಸಮಗ್ರ ಇಂಡಿಯದ ರಾಜ ನನ್ನಾಗಿ ಅಂಗೀಕರಿಸಲಾದೀತು? ರಾಜನೆಂದರೆ ವಂಶಾನುಕ್ರಮ ಯೋಗ್ಯತೆಯಿಂದ ರಾಜ್ಯಮುಖ್ಯನಾಗುವವನು. ಈ ವಂಶಾಧಿ ಕಾರವನ್ನು ಸಮಸ್ತ ಭಾರತದ ಮೇಲೆ ಯಾವ ಸಂಸ್ಥಾನದ ರಾಜ ನಿಗೆ ಕೊಟ್ಟಿದ್ದಿದ್ದರೆ ಎಲ್ಲರೂ ಸಮ್ಮತಿಸಿದ್ದಾರು? ಅಂಥಾ ಪ್ರಸಂಗ ವನ್ನೆತ್ತಿದೊಡನೆಯೆ ಆಗ್ಗೆ ಇದ್ದ ನೂರಾರು ಮಂದಿ ರಾಜ ಮಹಾರಾಜರುಗಳಲ್ಲಿ ಕಲಹಗಳು ಹುಟ್ಟಿ ಬಡಿದಾಟ ಪ್ರಾರಂಭ ವಾಗಬಹುದಾಗಿತ್ತಲ್ಲವೆ? ಇಂಡಿಯದಲ್ಲಿ ಬಹುಭಾಗ ಆಗ್ಗೆ ಬ್ರಿಟಿಷರದಾಗಿತ್ತು. ಅಲ್ಲಿ ಬೇರೆ ಯಾವ ರಾಜನೂ ಇರಲಿಲ್ಲ. ಇನ್ನುಳಿದಿದ್ದ ಭಾಗದಲ್ಲಿಯಾದರೋ ಸಂಸ್ಥಾನಾಧೀಶ್ವರರು— ಸಣ್ಣವರೂ ಪುಟ್ಟವರೂ ಸೇರಿ—೫೬೨ ಮಂದಿ ಇದ್ದರು. ಇವರಲ್ಲಿ ಯಾವ ಒಬ್ಬನನ್ನು ಸಮಸ್ತ ಭಾರತಕ್ಕೂ ರಾಜನೆಂದು ಅಂಗೀ ಕರಿಸುವುದಕ್ಕಾಗುತ್ತಿತ್ತು?

ಭಾರತವು ಬ್ರಿಟಿಷರ ಕೈಹಿಡಿತದಿಂದ ಬಿಡಿಸಿಕೊಂಡು ಸ್ವತಂತ್ರವಾದ ಬಳಿಕ, ಐಕ್ಯೈಕ ರಾಜ್ಯವಾಗಿ ಏಕಪ್ರಭುತ್ವದಲ್ಲಿರ ಬೇಕಾದದ್ದೆಂಬ ತತ್ತ್ವವನ್ನು ಎಲ್ಲರೂ ಅಂಗೀಕರಿಸಿದ್ದಾರೆ. ಇಂಡಿಯವು ಏಕರಾಜ್ಯವಾಗದೆ ಅನೇಕ ರಾಜ್ಯಗಳಾಗಿದ್ದ ಕಾಲ ದಲ್ಲಿ—ಅಲೆಗ್ಸಾಂಡರನ (ಕ್ರಿಸ್ತ ಪೂರ್ವ ೩೨೬) ದಂಡ ಯಾತ್ರೆಗೆ ಹಿಂದಿನಿಂದ—ನಮ್ಮ ನಾನಾ ರಾಜರುಗಳಲ್ಲಿ ಪರಸ್ಪರ ವೈಮನಸ್ಯ ಮಾತ್ಸರ್ಯಗಳು ಬೆಳೆದು, ಅವರವರ ಒಳಜಗಳ ಗಳಿಂದ ಪರರಾಜರ ಪ್ರವೇಶಕ್ಕೆ ಅನುಕೂಲವಾದದ್ದು ಜನದ ಜ್ಞಾಪಕದಿಂದ ಅಳಿಸಲಾಗದ ಚರಿತ್ರೆಯ ಪಾಠ. ಈ ಕಾರಣ ದಿಂದ, ಇಂಡಿಯವು ಈಗ ಹಿಮವತ್ಪರ್ವತದಿಂದ ರಾಮೇಶ್ವರದ ವರೆಗೂ ಅಖಂಡೈಕ ರಾಷ್ಟ್ರವಾದಲ್ಲದೆ ಅದಕ್ಕೆ ಅನ್ತಃ ಕಲಹ ಭೀತಿಯೂ ಅನ್ಯರಾಷ್ಟ್ರ ಭೀತಿಯೂ ತಪ್ಪವೆಂಬುದು ಎಲ್ಲರಿಗೂ ಮನಸ್ಸಿಗೆ ಬಂದಿತ್ತು. ಸಂಪಾದಿಸಿದ ಸ್ವಾತಂತ್ರ್ಯ ಉಳಿದು ಬೆಳೆಯಬೇಕಾದರೆ ಇಂಡಿಯಕ್ಕೆಲ್ಲ ಸರಕಾರ ಒಂದು,— ಒಂದೇ ಒಂದು ಮಾತ್ರ,—ಇರಬೇಕಾದದ್ದೆಂಬುದು ಸಿದ್ಧಾಂತ ವಾಯಿತು. ಆ ಸರಕಾರಕ್ಕೆ ಮುಖ್ಯಸ್ಥನಾಗಿರಲು ಯಾವ ವಂಶಪ್ರಾಪ್ತನಾದ ಸಂಸ್ಥಾನಾಧಿಪತಿಯೂ ಆಗದೆಂಬುದೂ ಸ್ಪಷ್ಟವಾಗಿತ್ತು. ಆ ೫೬೨ ಮಂದಿ ರಾಜಮಹಾರಾಜರುಗಳಲ್ಲಿ ಯಾವೊಬ್ಬಾತನನ್ನು ಭಾರತರಾಜತ್ವಕ್ಕೆ ಆರಿಸಿಕೊಂಡರೂ ಮಿಕ್ಕ ವರ ಪ್ರತಿಸ್ಪರ್ಧೆಯ ದೆಸೆಯಿಂದ ದೇಶೈಕ್ಯಕ್ಕೆ ಹಾನಿ ತಪ್ಪದು. ಸಂದರ್ಭ ಹೀಗಿರಲಾಗಿ, ಇಂಡಿಯವು ಅಖಂಡೈಕ ರಾಷ್ಟ್ರ ವಾಗಬೇಕಾದದ್ದೆಂದು ಗೊತ್ತಾದ ಕೂಡಲೆ ಅದಕ್ಕೆ ಜನತಾ ಪ್ರತಿನಿಧಿಯೇ ಮುಖ್ಯಾಧಿಕಾರಿಯಾಗಿರಬೇಕಾದದ್ದೆಂದೂ ಗೊತ್ತಾದಂತಾಯಿತು. "ರಾಜ" ಶಬ್ದವನ್ನೇ ಒತ್ತಟ್ಟಿಗಿಟ್ಟು ಕೇವಲ ಜನತಾ ನಿಯೋಜನೆಯಿಂದಲೇ ರಾಜ್ಯ—ಮುಖ್ಯನನ್ನು ಗೊತ್ತುಮಾಡಿಕೊಳ್ಳುವುದೆಂದರೆ, ಆಗ ರಾಜವಂಶಿಗಳ ಅನ್ಯೋನ್ಯ ಸ್ಪರ್ಧೆಗೆ ಅವಕಾಶವಿಲ್ಲದೆ ಹೋಗುವುದು ಮಾತ್ರವಲ್ಲದೆ, ಜನತೆಗೆ

ರಾಜ್ಯವಿಷಯದಲ್ಲಿ ಮಮತೆ ಹೆಚ್ಚಲು ಕಾರಣವಾಗುವುದು. ಇಂಥ ಆಲೋಚನೆಗಳಿಂದ ಫಲಿಸಿ ಬಂದದ್ದು ಇಂಡಿಯದ (ಪ್ರೆಸಿಡೆಂಟ್) ಪ್ರಜಾಧ್ಯಕ್ಷ ಅಥವಾ ರಾಷ್ಟ್ರಾಧ್ಯಕ್ಷ ಪದವಿ.[1]

---

1 "ಪ್ರೆಸಿಡೆಂಟ್" ಪದಕ್ಕೆ "ಪತಿ"—ರಾಷ್ಟ್ರಪತಿ—ಎಂದು ಕೆಲವರು ಸಮಾನಪದ ಮಾಡಿಕೊಂಡಿದ್ದಾರೆ. "ಪತಿ" ಶಬ್ದದಲ್ಲಿ ಗಂಡ, ಯಜಮಾನ, ಭರ್ತೃ, ಸಂಪೂರ್ಣಾಧಿಕಾರಿ, ಸ್ವತಂತ್ರಾಧಿಕಾರಿ—ಎಂಬ ಸೂಚನೆ ಸಾವಿರಾರು ವರ್ಷಗಳ ರೂಢಿಯಿಂದ ಕೂಡಿದೆ; ಸೀತಾಪತಿ, ದಂಪತಿ, ಭೂಪತಿ, ನರಪತಿ—ಇಂಥ ಮಾತುಗಳಲ್ಲಿ ಅಡಗಿರುವ ಸರ್ವ ಸ್ವತಂತ್ರಾಧಿಕಾರ ಧ್ವನಿಯನ್ನು ಲೋಪಮಾಡಬೇಕೆಂಬುದೇ ನಮ್ಮ ಪ್ರಜಾ ರಾಜ್ಯನಿಬಂಧನೆಯ ಮೂಲ ತಾತ್ಪರ್ಯ. ವಾಸ್ತವವಾಗಿ ನಮ್ಮ "ಪ್ರೆಸಿಡೆಂಟು" ಸರ್ವ ಸ್ವತಂತ್ರಾಧಿಕಾರಿಯಲ್ಲ. ಆತನು ಜನಾಧೀನ ಮತ್ತು ಶಾಸನಾಧೀನ. ಆ ಪದವಿಯ ಉದ್ದೇಶಗಳು ಮುಖ್ಯವಾಗಿ ಮೂರು ಬಗೆಯವು. (೧) ಸಮಸ್ತ ರಾಜ್ಯದ ಐಕ್ಯಕ್ಕೂ ಸ್ವಾಮಿತ್ವಕ್ಕೂ ಲಾಂಛನಪ್ರಾಯವಾಗಿರುವುದು—ಕಿರೀಟದಂತೆ ಅಥವಾ ಮೊಹರುಂಗುರದಂತೆ; (೨) ಉತ್ಸವಮೂರ್ತಿಯಾಗಿರುವುದು. ಜನತೆಯ ಆದರಾಭಿಮಾನಗಳಿಗೆ ಪ್ರತ್ಯಕ್ಷ ಪಾತ್ರನಾಗಿಯೂ ವಿದೇಶಗಳ ಸ್ನೇಹ ಗೌರವಗಳಿಗೆ ಪ್ರತ್ಯುತ್ತರ ಕರ್ತನಾಗಿಯೂ ಇರುವುದು. (೩) ವಿಷಮ ಸಂದರ್ಭಗಳಲ್ಲಿ ಸೇತುವೆಯಂತಿರುವುದು; ಮಂತ್ರಿ ಮೊದಲಾದ ಅಧಿಕಾರ ಸಂಸ್ಥೆಗಳೂ ಶಾಸನಸಂಸ್ಥೆಗಳೂ ವಿಹಿತವಾದಂತೆ ಕೆಲಸ ನಡಸಲಾರದ ದುರವಸ್ಥೆಯಲ್ಲಿ ತಾತ್ಕಾಲಿಕವಾಗಿ ವಿಶೇಷಾಧಿಕಾರವನ್ನು ಪ್ರಯೋಗಿಸಿ ಆ ಸಂಸ್ಥೆಗಳ ಸೂತ್ರಗಳನ್ನು ತಾನು ಕೈಗೆತೆಗೆದುಕೊಂಡು, ಪುನಃ ಆದಷ್ಟು ಬೇಗ ಯಥಾ ವಿಧಿಯ ಪರಿಸ್ಥಿತಿಗೆ ದಾರಿಮಾಡುವುದು. (೧) ಚಿಹ್ನೆ, (೨) ಅಲಂಕಾರ, (೩) ಆಪದ್ಗತಿ—ಈ ಮೂರರಲ್ಲಿಯೂ ಸ್ವತಂತ್ರ ಸಂಪೂರ್ಣಾಧಿಕಾರವಿಲ್ಲ; ಎಲ್ಲ ಅಧಿಕಾರವೂ ಶಾಸನಕ್ಕೆ ಅಧೀನವಾದದ್ದು. ಆದದ್ದರಿಂದ "ಪತಿ" ಶಬ್ದದ ಧ್ವನಿ ಇಲ್ಲಿ ಅಷ್ಟು ಉಚಿತವಾಗದು. "ಪತಿ" ಕರ್ತನು, "ಅಧ್ಯಕ್ಷ"ನಾದರೋ ಕರ್ತನಾಗಿರುವುದಕ್ಕಿಂತ ಹೆಚ್ಚಾಗಿ ಕೃತ್ಯಸಾಕ್ಷಿ. ಇಂಗ್ಲಿಷಿನಲ್ಲಿ "ಪ್ರೆಸಿಡೆಂಟ್" ಪದಕ್ಕೆ (Prae = ಮೊದಲು, ಅಗ್ರದಲ್ಲಿ + sidere = ಕೂಡು ಎಂಬ ಲ್ಯಾಟಿನ್ ಮೂಲದಿಂದ.) "ಅಗ್ರಾಸನಸ್ಥ," "ಮೇಲಿನಿಂದ ನೋಡುತ್ತಿರುವವನು" ಎಂದರ್ಥ. "ಅಧ್ಯಕ್ಷ" ಎಂಬುದರ ಭಾವವೂ ಅದೇ. "ಅಧ್ಯಕ್ಷ"ಪದವು ಉಪನಿಷತ್ತು ಭಗವದ್ಗೀತೆಗಳಲ್ಲಿ ಪ್ರಯೋಗವಾಗಿದೆ, ಯಾರು ತಾನು ಕೆಲಸಮಾಡದೆ

## ಸಾಧ್ಯಕ್ಷ ರಾಜ್ಯ

"ಪ್ರೆಸಿಡೆಂಟ್" ಅಥವಾ "ರಾಷ್ಟ್ರಾಧ್ಯಕ್ಷ" ಎಂಬ ಅಧಿಕಾರ ಪದವಿಯನ್ನು ಜನತಾಸ್ವಾಮ್ಯವುಳ್ಳ(ರಿಪಬ್ಲಿಕ್) ನಾಲ್ಕಾರು ದೇಶಗಳು ಇರಿಸಿಕೊಂಡಿದ್ದರೂ, ಆ ಪದವಿಯು ಎಲ್ಲ ಕಡೆಯೂ ಹೆಸರಿನಲ್ಲಿ ಏಕರೂಪವಾಗಿದೆಯೇ ಹೊರತು ನಿಯೋಜನಕ್ರಮದಲ್ಲಿಯೂ ಕಾರ್ಯಕ್ರಮದಲ್ಲಿಯೂ ಒಂದೊಂದು ಕಡೆ ಒಂದೊಂದು ರೂಪವನ್ನು ತಾಳಿದೆ. ಇಂಡಿಯದಲ್ಲಿ ನಾವು ಈಗ ಅನುಕರಿಸಿರುವುದು ಬಹುಮಟ್ಟಿಗೆ ಅಮೆರಿಕದ ಮಾದರಿಯನ್ನು. ಅಮೆರಿಕದ ಸಂಯುಕ್ತ ರಾಜ್ಯದ ರಾಷ್ಟ್ರಾಧ್ಯಕ್ಷ ಪದವಿಯ ಜೊತೆಗೆ ಇಂಗ್ಲೆಂಡಿನ ರಾಜಪದವಿಯನ್ನು ಸೇರಿಸಿ ನಮ್ಮ ರಾಜ್ಯಮುಖ್ಯ ಪದವಿಯನ್ನು ರಚಿಸಿಕೊಂಡಿದ್ದೇವೆ.

## ಅಮೆರಿಕದ ಮಾದರಿ

ಅಮೆರಿಕದಲ್ಲಿ ಸರಕಾರದ ಮುಖ್ಯ ಜವಾಬ್ದಾರಿ ಹೊತ್ತವನು ಅಧ್ಯಕ್ಷ, ಅಲ್ಲಿ ರಾಜನಿಲ್ಲ. ಇಂಗ್ಲೆಂಡಿನಲ್ಲಿ ಮುಖ್ಯ ಜವಾಬ್ದಾರಿ ಹೊತ್ತವನು ರಾಜನಲ್ಲ, ಮುಖ್ಯಮಂತ್ರಿ.

ಇಂಗ್ಲೆಂಡಿನ ರಾಜನು ಅಮೆರಿಕದ ಅಧ್ಯಕ್ಷನಂತಲ್ಲ. ಅಧ್ಯಕ್ಷನಿಗಿರುವ ಉತ್ತರೋಕ್ತಿಯ ಭಾರ ಆ ರಾಜನಿಗಿಲ್ಲ.

ನಮ್ಮ ಇಂಡಿಯದ ಅಧ್ಯಕ್ಷನು ಅಮೆರಿಕದ ಅಧ್ಯಕ್ಷನಂತಲ್ಲ, ಇಂಗ್ಲೆಂಡಿನ ರಾಜನಂತೆ. ಇಂಡಿಯದ ಮುಖ್ಯಮಂತ್ರಿ ಇಂಗ್ಲೆಂಡಿನ ಮುಖ್ಯಮಂತ್ರಿಯಂತೆ—ಮುಖ್ಯ ಜವಾಬ್ದಾರಿ ಹೊತ್ತವನು.

ಸುಮ್ಮನೆ ನೋಡಿಕೊಂಡಿರಲಾಗಿ ಆ ನೋಟದ ಮಾತ್ರದಿಂದಲೇ ಇತರ ಶಕ್ತಿಗಳು ಕೆಲಸ ನಡಸುವಂತೆ ಆಗಿದೆಯೋ ಆ ಮೂಲ ಚೈತನ್ಯವೇ 'ಅಧ್ಯಕ್ಷ'. ಆದದ್ದರಿಂದ "ಪ್ರೆಸಿಡೆಂಟ್" ಎಂಬುದಕ್ಕೆ "ರಾಷ್ಟ್ರಾಧ್ಯಕ್ಷ" ಎಂಬುದು ಚೆನ್ನಾಗಿ ಹೊಂದುವ ಸಮಾನಪದ.

ಈ ಏರ್ಪಾಟಿನ ವಿವರಗಳನ್ನು ಇನ್ನೂ ಸ್ವಲ್ಪ ನೋಡೋಣ.

ಅಮೆರಿಕದ ರಾಷ್ಟ್ರಾಧ್ಯಕ್ಷನು ಪ್ರಜಾನಿಯುಕ್ತನಾದವನು; ಇಂಡಿಯದಾತನೂ ಹಾಗೆಯೇ.

ಆದರೆ ಅಮೆರಿಕದ ರಾಷ್ಟ್ರಾಧ್ಯಕ್ಷನು ಸ್ವತಃ ಕೆಲಸ ಮಾಡಬಲ್ಲವನು ; ಮಂತ್ರಿ ಸಂಪುಟದ ಸಲಹೆಯಂತೆ—ಅದರ ಮೂಲಕವೇ—ಕೆಲಸ ಮಾಡಬೇಕಾದವನಲ್ಲ. ಅವನು ಸ್ವತಂತ್ರನಬಹುದು. ಅವನಿಗೆ ನಿಜವಾಗಿ ಮಂತ್ರಿಗಳೇ ಇಲ್ಲ. ಅವನು "ಸೆಕ್ರೆಟರಿ"ಗಳ—ಕಾರ್ಯದರ್ಶಿಗಳ—ಮೂಲಕ ಕೆಲಸ ನಡಸುತ್ತಾನೆ. ಈ ಕಾರ್ಯದರ್ಶಿ ಸಮೂಹಕ್ಕೆ 'ಕ್ಯಾಬಿನೆಟ್'—ಮಂತ್ರಿ ಸಂಪುಟ—ಎಂಬ ಹೆಸರು ಕೇವಲ ಔಪಚಾರಿಕವಾಗಿ ರೂಢಿಯಲ್ಲಿದೆ. ವಾಸ್ತವವಾಗಿ ಆ ಕಾರ್ಯದರ್ಶಿಗಳು ಅವನು ನಿಯಮಿಸಿಕೊಂಡ ನೌಕರರು,—ಅವರು ಇಂಗ್ಲೆಂಡಿನ ಮಂತ್ರಿಗಳಂತೆ ಪ್ರಜಾಪ್ರತಿನಿಧಿಗಳೂ ಶಾಸನಸಭಾಪ್ರಮುಖರೂ ಅಲ್ಲ.

ಇಂಡಿಯದ ರಾಷ್ಟ್ರಾಧ್ಯಕ್ಷನು ಅಮೆರಿಕದಾತನಂತೆ ಸ್ವತಂತ್ರನಲ್ಲ. ಈತನು ಆತನಂತೆಯೇ ಪ್ರಜಾಮಂಡಲದ ಚುನಾವಣೆಯಿಂದ ಅಧಿಕಾರ ಪಡೆದವನಾದರೂ, ಈತನ ಅಧಿಕಾರವಿಧಾನ ಮಾತ್ರ ಇಂಗ್ಲೆಂಡಿನ ರಾಜನದನ್ನು ಹೋಲುತ್ತದೆ. ಭಾರತ ರಾಷ್ಟ್ರಾಧ್ಯಕ್ಷನು ತನ್ನ ಸಾಮಾನ್ಯ ಚರ್ಯೆಯಲ್ಲಿ ಬ್ರಿಟಿಷ್ ರಾಜನಂತೆ ಮಂತ್ರಿಸಂಪುಟಕ್ಕೆ ಅನುಕೂಲನಾಗಿರಬೇಕಾದವನು. ಆ ಮಂತ್ರಿಸಂಪುಟವಾದರೋ ರಾಜ್ಯದ ಪಾರ್ಲಿಮೆಂಟೆಂಬ ಶಾಸನ ಸಂಸ್ಥೆಯಲ್ಲಿ ಪ್ರಜಾಪ್ರತಿನಿಧಿಗಳಾಗಿರುವವರೊಳಗಣಿಂದ ಘಟಿತವಾದದ್ದು ಮತ್ತು ಆ ಶಾಸನ ಸಂಸ್ಥೆಗೆ ಜವಾಬು ಹೇಳಬೇಕಾದದ್ದು. ಪ್ರಜಾಮಂಡಲಕ್ಕೆ ಉತ್ತರೋಕ್ತಿಯ ಭಾರವನ್ನು ಹೊತ್ತಿರುವುದು ಆ ಮಂತ್ರಿಸಂಪುಟವೇ ಹೊರತು ರಾಷ್ಟ್ರಾಧ್ಯಕ್ಷನಲ್ಲ ; ಇಂಗ್ಲೆಂಡಿನಲ್ಲಿ ರಾಜನಲ್ಲ.

## ಇಂಗ್ಲೆಂಡಿನ ರಾಜ

ಇಂಗ್ಲೆಂಡಿನ ರಾಜನು ಅನುದಿನದ ರಾಜ್ಯ ಜೀವನದಲ್ಲಿ ನಿಷ್ಕ್ರಿಯನಾದ ಸಾಕ್ಷಿ ಮಾತ್ರ. ಎಲ್ಲ ಕೆಲಸಗಳನ್ನೂ ಗೊತ್ತು ಮಾಡಿ ನಡೆಸತಕ್ಕದ್ದು ಮಂತ್ರಿಸಂಪುಟ. ಆ ಕೆಲಸಗಳೆಲ್ಲ ರಾಜನ ಹೆಸರಿನಲ್ಲಿ ನಡೆಯುತ್ತವಾದರೂ ಆತನು ನಿಜವಾಗಿ ಮಾಡುವ ಕೆಲಸ ತನಗೊಪ್ಪಿಸಿದ ಕಾಗದಕ್ಕೆ ರುಜುಹಾಕುವುದು. ಇದು ಸಾಧಾರಣದ ನಡವಳಿಕೆ. ಕೆಲವು ವಿಶೇಷ ಸಮಯಗಳಲ್ಲಿ ಮಾತ್ರ ರಾಜನು ವಿಶೇಷಾಧಿಕಾರಗಳನ್ನು ಪ್ರಯೋಗಿಸುವುದು ಕರ್ತವ್ಯವಾಗುತ್ತದೆ.

(೧) ಮಂತ್ರಿಸಂಪುಟದ ಯಾವುದಾದರೊಂದು ಆಲೋಚನೆಯಿಂದ ಅಥವಾ ನಡವಳಿಕೆಯಿಂದ ಶಾಸನ ಸಂಸ್ಥೆಯ (ಪಾರ್ಲಿಮೆಂಟ್) ಅಧಿಕಭಾಗದ ವಿಶ್ವಾಸವು ಆ ಮಂತ್ರಿಗಣಕ್ಕೆ ತಪ್ಪಿಹೋಗಬಹುದೆಂದು ರಾಜನಿಗೆ ತೋರಿದಾಗ, ಆತನು ಮಂತ್ರಿಗಳಿಗೆ ಎಚ್ಚರಿಕೆ ಕೊಟ್ಟು, ಆ ವಿಷಯವನ್ನು ಪುನರ್ವಿಚಾರ ಮಾಡತಕ್ಕದ್ದೆಂದು ಅವರನ್ನು ಪ್ರೇರಿಸಿ, ಅವರಿಟ್ಟ ಕಾಗದಕ್ಕೆ ರುಜುಹಾಕುವುದನ್ನು ಆದಷ್ಟು ತಡಮಾಡಿ, ಅವರು ಬದಲಾಯಿಸಿಕೊಳ್ಳಲು ಅವಕಾಶ ಉಂಟುಮಾಡಬಹುದು. ಹೀಗೆ ಪುನರ್ವಿಮರ್ಶನ ಪ್ರೇರಣೆ ಬ್ರಿಟಿಷ್ ರಾಜನ ವಿಶೇಷಾಧಿಕಾರದಲ್ಲೊಂದಂತೆ. ಅದು ಮಂತ್ರಿಗಳು ದುಡುಕಬಹುದಾದ ಸಂಭವವನ್ನು ಕಡಮೆಮಾಡುವುದಕ್ಕಾಗಿ.

(೨) ಮಂತ್ರಿಸಂಪುಟವು ದುರ್ಬಲವಾಗಿದೆಯೆಂದು ತೋರಿದಾಗ ರಾಜನು ಅದಕ್ಕೆ ಧೈರ್ಯ ಹೇಳಿ ಅದನ್ನು ಪ್ರೋತ್ಸಾಹಪಡಿಸಬಹುದು. ದೇಶಹಿತಕ್ಕೆ ಯುಕ್ತವೆಂದು ತನಗೆ ತೋರಿದ ವಿಷಯವನ್ನು ತಾನೇ ಮಂತ್ರಿಸಂಪುಟದ ಪರ್ಯಾಲೋಚನೆಗಾಗಿ ಸೂಚಿಸಬಹುದು; ಇದು ಮಂತ್ರಿಗಳ ಪುರೋದೃಷ್ಟಿಯಲ್ಲಿರಬಹುದಾದ ಕೊರತೆಗಳನ್ನು ಭರ್ತಿಮಾಡುವುದಕ್ಕಾಗಿ.

ಸಾಮಾನ್ಯವಾಗಿ ಮಂತ್ರಿಗಳು—ಅದರಲ್ಲಿಯೂ ಮುಖ್ಯಮಂತ್ರಿಯೊಬ್ಬನ ವಿನಾ ಇತರರು—ಒಬ್ಬೊಬ್ಬರೂ ಒಂದೆರಡು ವರ್ಷಗಳ ಮಾತ್ರದ, ಅಥವಾ ಮೂರು-ನಾಲ್ಕು ವರ್ಷಗಳ ಮಾತ್ರದ, ರಾಜ್ಯಾನುಭವವುಳ್ಳವರಾಗಿರುತ್ತಾರೆ; ಅವರ ಆ ಅನುಭವವು ಸ್ವಪಕ್ಷ ಮೂಲಕವಾದದ್ದು. ರಾಜನಾದರೋ ಹತ್ತಾರು ವರ್ಷಗಳ ಸಂತತವಾದ ರಾಜ್ಯಾನುಭವವುಳ್ಳವನು; ಮತ್ತು ಅವನ ಅನುಭವವು ನಾನಾ ಪಕ್ಷಗಳ ಮತ್ತು ನಾನಾ ಜನರ ಮೂಲಕ ಒಂದದ್ದು. ಆದದ್ದರಿಂದ ಅವನ ತಿಳಿವಳಿಕೆ ಎಷ್ಟೋ ವೇಳೆ ಮಂತ್ರಿಗಳದಕ್ಕಿಂತ ವಿಸ್ತಾರವಾದದ್ದಾಗಿಯೂ ಅವನ ವಿಮರ್ಶನೆ ಅವರದಕ್ಕಿಂತ ಬಹುಮುಖವಾದದ್ದಾಗಿಯೂ ಇರುತ್ತದೆ. ಅವನ ಈ ವಿಶೇಷ ಪ್ರಾಜ್ಞತೆಯ ಫಲವನ್ನು ಅವನು ಮಂತ್ರಿಗಳಿಗೆ ದೊರಕಿಸಬಹುದು.

ರಾಜನು ಕೊಟ್ಟ ಎಚ್ಚರಿಕೆಗಳನ್ನೂ ಹಿತಸೂಚನೆಗಳನ್ನೂ ಮಂತ್ರಿ ಅಂಗೀಕರಿಸಬೇಕೆಂಬ ನಿರ್ಬಂಧವೇನೂ ಇಲ್ಲ. ರಾಜನ ಮಾತು ಗೋಪ್ಯವಾದದ್ದು. ಆತನು ಮಂತ್ರಿಗೆ ಏನು ಹೇಳಿದನೆಂಬುದು ಹೊರಗಿನವರಿಗಾರಿಗೂ ತಿಳಿಯಬಾರದು. ಆತನು ಹೇಳಿದ್ದನ್ನು ಅಂಗೀಕರಿಸಿಯಾಗಲಿ ನಿರಾಕರಿಸಿಯಾಗಲಿ ತೀರ್ಮಾನಿಸುವ ಸ್ವಾತಂತ್ರ್ಯ ಮಂತ್ರಿಗಿರುತ್ತದೆ.

(೩) ಮಂತ್ರಿಗಳು ಯಾವ ಕಾರಣದಿಂದಲೇ ಆಗಲಿ ಅಧಿಕಾರ ಬಿಡಬೇಕಾಗಿ ಬಂದಾಗ, ರಾಜನು ರಾಜ್ಯಸೂತ್ರಗಳನ್ನು ಅವರ ಕೈಗಳಿಂದ ತನ್ನ ಕೈಗಳಿಗೆ ತೆಗೆದುಕೊಂಡು, ಬೇರೊಂದು ಮಂತ್ರಿಸಂಪುಟವೇರ್ಪಡುವವರೆಗೂ ಆ ಸೂತ್ರಗಳನ್ನು ಕಾಪಾಡಿ, ಆ ಹೊಸ ಸಂಪುಟಕ್ಕೆ ಅದನ್ನೊಪ್ಪಿಸಿಕೊಡಬೇಕಾದದ್ದು. ಶಾಸನಸಭೆಗೆ ರಾಜ್ಯನಿಬಂಧನೆಯಿಂದ ಗೊತ್ತಾಗಿರುವ ಕಾಲಾವಧಿ ಮುಗಿದು ಅದು ವಿಸರ್ಜನೆಯಾಗುವಾಗಲೂ, ಮಂತ್ರಿಸಂಪುಟವು ಶಾಸನ ಸಂಸ್ಥೆಯ ವಿಶ್ವಾಸವನ್ನು ಕಳೆದುಕೊಂಡೋ ಅಥವಾ ಬೇರೆ ಕಾರಣದಿಂದಲೋ ರಾಜೀನಾಮೆ ಕೊಟ್ಟಾಗಲೂ ಶಾಸ

ಸ್ವಾಧಿಕಾರ ಕಾರ್ಯನಿರ್ವಾಹಕಾಂಗವನ್ನು ತಾತ್ಕಾಲಿಕವಾಗಿ ತಾನೇ ವಹಿಸಿಕೊಂಡು, ಶಾಸನಸಭೆಯೂ ಮಂತ್ರಿಸಂಪುಟವೂ ಪುನಃ ಕೂಡಿದಷ್ಟು ಬೇಗ ರಚಿತವಾಗಲು ತಕ್ಕ ಎಲ್ಲ ಏರ್ಪಾಟುಗಳನ್ನೂ ಮಾಡಿಸುವುದು ರಾಜನ ವಿಶೇಷ ಕರ್ತವ್ಯ.

ಹೀಗೆ ಮಂತ್ರಿಗಳ ವಿಷಯದಲ್ಲಿ (೧) ಪುನರ್ವಿಮರ್ಶನ ಪ್ರೇರಣೆ ಮತ್ತು (೨) ಹಿತಪ್ರೋತ್ಸಾಹ, (೩) ರಾಜ್ಯದ ವಿಷಮ ಸಂದರ್ಭ ಪಾಲನೆ—ಇವು ಇಂಗ್ಲೆಂಡಿನ ವ್ಯವಸ್ಥೆಯಲ್ಲಿ ರಾಜನಿಗಿರುವ ಮುಖ್ಯ ಕರ್ತವ್ಯಗಳು. ಇವು ಶಾಸನ ಗ್ರಂಥದಲ್ಲಿ ಬರೆದಿರುವವಲ್ಲ; ಇಂಗ್ಲೆಂಡಿನ ರಾಜ್ಯವ್ಯವಸ್ಥೆಗೆ ಗ್ರಂಥರೂಪ ಬಂದಿಲ್ಲ. ಆ ವ್ಯವಸ್ಥೆ ಬಹುಕಾಲದ ರೂಢಿಯ ಆಧಾರದ ಮೇಲೆ ನಿಂತಿದೆ.

ಇಂಡಿಯದ ಇಂದಿನ ರಾಜನಿಬಂಧನೆ ಹಾಗಲ್ಲದೆ ಲಿಖಿತ ಗ್ರಂಥವಾಗಿದ್ದರೂ ಅದರಲ್ಲಿ ಅಧ್ಯಕ್ಷಪದವಿಯ ಕರ್ತವ್ಯಗಳು ಪ್ರಾಯಶಃ ಬ್ರಿಟಿಷ್ ರಾಜನ ಕರ್ತವ್ಯಗಳನ್ನು ಹೋಲುವಂಥವುಗಳೇ ಆಗಿವೆ ಎಂಬುದು ಇಲ್ಲಿಯ ಸಂದರ್ಭಗಳಿಂದ ತೋರಿಬರುತ್ತದೆ. ನಮ್ಮ ಮಂತ್ರಿಸಂಪುಟದ ಯೋಜನೆಯೂ ಕಾರ್ಯನಿಯಮಗಳೂ ಬ್ರಿಟಿಷರದನ್ನು ಹೋಲುತ್ತವೆ ನಮ್ಮ ಅಧ್ಯಕ್ಷನು ಬ್ರಿಟಿಷ್ ರಾಜನಂತೆ ಮಂತ್ರಿಸಂಪುಟದ ಮುಖಾಂತರವೇ ಕೆಲಸ ನಡಸಬೇಕಾದವನಾದದ್ದರಿಂದ ಬ್ರಿಟಿಷ್ ರಾಜನಿಗಿರುವ ಕರ್ತವ್ಯ ಸಮಯಗಳಂಥವೇ ಇಂಡಿಯದ ಅಧ್ಯಕ್ಷನವೆಂದು ನಾವು ಭಾವಿಸಬಹುದಾಗಿದೆ. ಮಂತ್ರಿಗಳ ಮೇಲೆ ಆತನಿಗೆ ಅಧಿಕಾರವಿಲ್ಲ; ಆತನ ಪ್ರಭಾವಕ್ಕೆ ಮಾತ್ರ ಅವಕಾಶವುಂಟು—ಇದು ಇಂದಿನ ಪರಿಸ್ಥಿತಿ. "ಅಧಿಕಾರವು" ಶಾಸನಬಲದಿಂದ ನಡೆಯತಕ್ಕದ್ದು; "ಪ್ರಭಾವವು" ಗೌರವ ದಾಕ್ಷಿಣ್ಯಗಳಿಂದ ನಡೆಯತಕ್ಕದ್ದು. ಇಂಥ ಪ್ರಭಾವಕ್ಕೆ ಅವಕಾಶವಿರಬೇಕೆಂದೇ ನಮ್ಮ ರಾಜ್ಯನಿಬಂಧನೆಯು ರಾಷ್ಟ್ರಾಧ್ಯಕ್ಷನಿಗೆ ಸರ್ಕಾರದ ಆಡಳಿತದ

ಏರ್ಪಾಟುಗಳನ್ನು ಕುರಿತು ತಿಳಿವಳಿಕೆ ಸಂಪಾದಿಸಿಕೊಳ್ಳಲು ಸೌಕರ್ಯವನ್ನುಂಟುಮಾಡಿಕೊಟ್ಟಿದೆ. ರಾಷ್ಟ್ರಾಧ್ಯಕ್ಷನು ಮಂತ್ರಿ ಸಂಪುಟಕ್ಕೆ ಎಚ್ಚರಿಕೆ ಸಲಹೆಗಳನ್ನು ಕೊಡಬಲ್ಲವನಾಗಬೇಕಾದರೆ ಅದಕ್ಕಾಗಬೇಕಾಗುವ ವರದಿ ವರ್ತಮಾನಗಳನ್ನು ಮಂತ್ರಿಗಳು ಅವನಿಗೆ ಒದಗಿಸಿಕೊಡಬೇಕು. ಈ ಬಗ್ಗೆ ನಮ್ಮ ರಾಜ್ಯನಿಬಂಧನೆ ತಕ್ಕ ಅನುಕೂಲತೆಯನ್ನು ಕಲ್ಪಿಸಿದೆ (ಖಂಡ ೭೮).

# ೧೪. ರಾಜ್ಯದಲ್ಲಿ ಪ್ರಜಾತಂತ್ರ

ಇಬ್ಬರು ಮನುಷ್ಯರು ಒಂದು ಕಡೆ ಬಾಳಬೇಕೆಂದು ಎಂದು ಎಲ್ಲಿ ಹೊರಟು ಮನಸ್ಸು ಮಾಡಿಕೊಂಡರೋ ಅಂದು ಅಲ್ಲಿ ರಾಜ್ಯವೆಂಬುದು ಮೊದಲಾಯಿತು. ಅವರಿಬ್ಬರಲ್ಲಿ ಒಂದು ಒಪ್ಪಂದವಿಲ್ಲದಿದ್ದಲ್ಲಿ ಇಬ್ಬರಿಗೂ ಜಗಳ ಹುಟ್ಟಿ, ಒಬ್ಬನಿಂದಿ ನ್ನೊಬ್ಬನು ಹತನಾಗುವುದು ಖಂಡಿತ. ಒಪ್ಪಂದವೆಂದರೆ ಒಬ್ಬನು ಇನ್ನೊಬ್ಬನ ಇಷ್ಟಕ್ಕನುಕೂಲವಾಗಿ ತನ್ನ ಸ್ವಂತ ಇಷ್ಟವನ್ನು ತಿದ್ದಿಕೊಂಡು ನಡೆಯಲೊಪ್ಪಿರುವುದು. ಅದೇ ಅನ್ಯೋನ್ಯಾನು ಕೂಲತೆ. ಆ ಇಬ್ಬರಲ್ಲಿ ಇವನು ಹೇಳಿದಂತೆ ಅವನು ಕೆಲವು ಸಾರಿಯೂ ಅವನು ಹೇಳಿದಂತೆ ಇವನು ಕೆಲವು ಸಾರಿಯೂ ನಡೆದುಕೊಳ್ಳಬೇಕಾದೀತು. ಈ ತೆರದ ಸಮ್ಮತಿಯೇ,—ಅದ ರಲ್ಲಿಯ ವಿಧಾಯಕ-ವಿಧೇಯ ಸಂಬಂಧದ ಅಂಗೀಕಾರವೇ,— ರಾಜ್ಯಸೂತ್ರ.

ರಾಜ್ಯ ಶರೀರವು ಸಪ್ತಾಂಗ ಸಹಿತವಾದದ್ದೆಂಬ ನಮ್ಮ ಪ್ರಾಚೀನ ಮತವನ್ನು ಹಿಂದೆ (ಪುಟ ೨೮) ನೋಡಿದ್ದೇವೆ. ಆ ಅಂಗಸಮುದಾಯಕ್ಕೆ "ಅಂಗಿ"—ಎಂದರೆ ಅಂಗಧರಿಸಿರುವ ಜೀವ—ಪ್ರಜಾ ಸಮಷ್ಟಿಯಲ್ಲದೆ ಇನ್ನಾರು? ಪ್ರಜೆಯ ಸಮಸ್ತದ ಐಕ್ಯರೂಪವೇ ರಾಜ್ಯ. ಒಂದು ದೇಶದ ನಿವಾಸಿ ಗಳಾದ ಪ್ರಜಾಜನರು ತಮ್ಮ ಕ್ಷೇಮ ಸೌಕರ್ಯಗಳಿಗಾಗಿ ಅಂಗೀಕರಿಸಿಕೊಂಡಿರುವ ವಿಧಾಯಕ-ವಿಧೇಯ ರೂಪವಾದ— ಕರ್ತವ್ಯ-ಪ್ರಾಪ್ತವ್ಯ ರೂಪವಾದ,—ಹಕ್ಕು-ಬದ್ಧತೆಗಳ ರೂಪ ವಾದ ವ್ಯವಸ್ಥೆಯೇ ರಾಜ್ಯ. ಆ ವ್ಯವಸ್ಥೆಯನ್ನು ಕಾಪಾಡಿ ನಡೆಸಿಕೊಡಲು ಅದರಿಂದಲೇ ಗೊತ್ತಾಗಿರುವ ಮಾನುಷ ಯೋಜನೆಯೇ ಸರಕಾರ.

## ಪರಂಪರಾವಿಕಾಸ

ರಾಜ್ಯಸಂಸ್ಥೆಯು ಕಾಲಕ್ರಮದಲ್ಲಿ ಪರಂಪರಾ ವಿಕಾಸದಿಂದ ಬೆಳೆದಿದೆ. ನಮ್ಮ ದೇಶದಲ್ಲಿ ಬಂಡಿಯೆಂಬ ಪ್ರಯಾಣ ಸಾಧನ ಮೊಟ್ಟಮೊದಲು ಯಾವ ರೂಪದಲ್ಲಿತ್ತೋ ಈಗ ತಿಳಿಯಬಾರದು. ಆದರೆ ಒಡ್ಡರು ಹಳ್ಳಿಗಾಡಿನಲ್ಲಿ ಕಲ್ಲು ಸಾಗಿಸಲು ಕೋಣ ಕಟ್ಟಿ ಸೆಳೆಯಿಸುವ ಒರಟು ಬಂಡಿ ಈಗಲೂ ಇದೆ. ಅದರಿಂದ ಎತ್ತಿನ ಗಾಡಿ, ಜಟಕಾಗಾಡಿ, ಸಾರೋಟು, ರೈಲುಸಾಲು, ಬೈಸಿಕಲ್ಲು, ಹತ್ತಾರುಬಗೆಯ ಮೋಟರು ಏರೋಪ್ಲೇನ್‌ಗಳು—ಇವೆಲ್ಲ ಒಂದರ ತರುವಾಯ ಮತ್ತೊಂದು—ಒಂದರ ಕೊಂಚ ಬದಲಾವಣೆಯಿಂದ ಮತ್ತೊಂದು—ಹುಟ್ಟಿ ಬಂದಿವೆ. ಇದೇ ಲಕ್ಷಣ ವಿಕಾಸ ಪರಂಪರೆ (ಎವೊಲ್ಯೂಷನ್). ಈ ಬಗೆಯ ಜಾತಿ ಲಕ್ಷಣ ವಿಕಾಸವನ್ನು ನಾವು ನಮ್ಮ ಎಲ್ಲ ಸಾಧನ ಸಾಮಗ್ರಿಗಳಲ್ಲಿಯೂ ಕಾಣಬಹುದು. ಗೋಡೆಗಡಿಯಾರ, ಮೇಜುಗಡಿಯಾರ, ಜೇಬುಗಡಿಯಾರ, ಕೈಗಡಿಯಾರ—ಇವುಗಳಲ್ಲಿಯೂ ಜಾತಿಲಕ್ಷಣ ವಿಕಾಸ ಕಾಣಬರುತ್ತದೆ. ಇದೇ ತೆರದ ಪರಂಪರಾ ವಿಕಾಸ ನಮ್ಮ ಸಸ್ಯ ವೃಕ್ಷಗಳಲ್ಲಿಯೂ ತೋರುತ್ತದೆ. ಸೀವಾರ ವೆಂಬ ಕಾಡು ಬತ್ತದಿಂದ ದೊಡ್ಡಬೈರ, ಅದರಿಂದ ಸಣ್ಣಬೈರ, ಅದರಿಂದ ಸಣ್ಣಕ್ಕಿ, ಮರಳುಕಾಂತಿ, ಇಂದ್ರಭೋಗ—ಇಂಥಾ ಮೇಲ್ತೆರದ ಸಲ್ಲುಗಳು; ನಾರುಮಾವಿನಿಂದ ಕಸಿಮಾವು, ರಸಪೂರಿ, ಮಲ್ಗೋವಾ, ಬಾದಾಮಿ—ಇಂಥವು; ಕಾಡು ಕಬ್ಬಿನಿಂದ ಪಟ್ಟಾಪಟ್ಟಿ, ರಸತಾಳೆ ಮೊದಲಾದ ಹಸನು ಜಾತಿಗಳು ಒಂದರಿಂದೊಂದು ಕೊಂಚ ಕೊಂಚ ರೂಪ ವ್ಯತ್ಯಾಸ ಗುಣ ವ್ಯತ್ಯಾಸಗಳನ್ನು ಪಡೆದು ಉತ್ತಮವೆನಿಸಿಕೊಂಡು ಹುಟ್ಟಿವೆ. ಈ ತೆರದ ಲಕ್ಷಣೋತ್ಕರ್ಷ ಪರಂಪರೆ ಇತರ ಪ್ರಾಣಿ ವರ್ಗಗಳಲ್ಲಿಯೂ ಕಾಣಬರುತ್ತವೆ: ಹುಲಿಯಿಂದ ಬೆಕ್ಕಿನ ವರೆಗೆ; ಹಾವಿನಿಂದ ಹಲ್ಲಿಯ ವರೆಗೆ; ಕಪಿಯಿಂದ ಮನುಷ್ಯನ

ವರೆಗೆ. ಮನುಷ್ಯದೇಹದ ಅವಯುವಗಳ ರೂಪ ರಚನೆಯು ಚರಿತ್ರೆಯಲ್ಲಿಯೇ ಕ್ರಮಿಕ ವ್ಯತ್ಯಾಸಗಳು ಪಾರಂಪರ್ಯವಾಗಿ ಕಾಣಬರುತ್ತವೆಂದು ಜೀವಾಂಗ ಶಾಸ್ತ್ರಜ್ಞರು ಹೇಳುತ್ತಾರೆ. ಈ ತೆರದ ಲಕ್ಷಣ ವಿಕಾಸ ಪಾರಂಪರ್ಯವೇ "ಎವೊಲ್ಯೂಷನ್." "ಎವಾಲ್ವ್" (Evolve) ಎಂದರೆ "ಹೊರ ಹೊರಳಿ ಒರು," "ಬಹಿರುದ್ಗಮಿಸು," "ಉತ್ಸರ್ಜನವಾಗು," "ಉದ್ಭವಿಸು" ಎಂದು ಶಬ್ದಾರ್ಥ. ಇಂಥಾ ಪರಂಪರಾ ವಿಕಾಸವು ರಾಜ್ಯ ಸಂಸ್ಥೆಯ ಸ್ವರೂಪ ಚರಿತ್ರೆಯಲ್ಲಿಯೂ ಕಾಣಬರುತ್ತದೆ. ಮೊದಮೊದಲು ಏಕನಾಯಕ ಪ್ರಭುತ್ವ, ಆಮೇಲೆ ಅನುವಂಶೀಯ ನಾಯಕತ್ವ ಅಥವಾ ರಾಜತ್ವ, ಬಳಿಕ ವಿದ್ವದ್ವರ್ಗ ಪ್ರಭುತ್ವ, ಶ್ರೀಮಂತವರ್ಗ ಪ್ರಭುತ್ವ, ಸಚಿವ ಪ್ರಭುತ್ವ, ಭೃತಕ ಪ್ರಭುತ್ವ, ಅನೇಕ ನಾಯಕಪ್ರಭುತ್ವ—ಹೀಗೆ ರಾಜ್ಯಾಂಗವು ನಾಲ್ಕಾರು ಮಾರ್ಪಾಟುಗಳನ್ನು ಪಡೆದು ಬೆಳೆದಿದೆ. ಮೊದಮೊದಲು ಅಂತರ್ಭೂತವಾಗಿದ್ದು, ಕ್ರಮೇಣ ಜನತೆಯ ಅನುಭವ ಜನಿತವಾದ ವಿವೇಕದ ದೆಸೆಯಿಂದ ಬಹಿರ್ಭೂತವಾದ ರಾಜ್ಯ ಲಕ್ಷಣಗಳಲ್ಲಿ ಎಲ್ಲಕ್ಕಿಂತ ಈಚಿನದು ಪ್ರಜಾತತ್ತ್ವ. ಪ್ರಜೆಯೆಂಬುದು ಮೊದಲು ಇದ್ದ ಮೇಲೆಯೇ ರಾಜ್ಯವೆಂಬುದು ಬಂದು ನಿಂತದ್ದು. ಆದರೂ ಆ ಮೂಲದ್ರವ್ಯವಾದ ಪ್ರಜೆಗೆ ತನ್ನ ಮಹತ್ತ್ವ ಎಷ್ಟರದೆಂಬುದರ ಅರಿವು ಆಗಿರುವುದು ಈಗೀಗ ತಾನೆ. ಆ ಅರಿವು ಈಗ ಆಗಿರುವಷ್ಟು ಚೆನ್ನಾಗಿ ಹಿಂದೆ ಯಾವಾಗಲೂ ಆಗಿರಲಿಲ್ಲ. ಆದದ್ದರಿಂದಲೇ ನಮ್ಮ ಕಾಲಕ್ಕೆ ಪ್ರಜಾಯುಗವೆಂದು ಹೆಸರು ಬಂದಿದೆ. ರಾಜ್ಯಕ್ಕೆ ತಾನೇ ಪ್ರಧಾನಾಂಗವೆಂಬುದನ್ನು,—ತಾನೇ ಸರ್ವಾಂಗಸ್ವಾಮಿಯೆಂಬುದನ್ನು,—ಪ್ರಜೆ ಈಗ ಕಂಡುಕೊಂಡಿದೆ.

## ಅರ್ಧಜ್ಞಾನದ ಅಪಾಯ

ಈ ಸ್ವಮಹಿಮೆಯ ಜ್ಞಾನವು ಪ್ರಜೆಯ ಸ್ವಸ್ವರೂಪಜ್ಞಾನದ ಅರ್ಧಭಾಗ ಮಾತ್ರ. ಈ ಅರ್ಧಜ್ಞಾನದಿಂದ ಅದು ಶ್ರೇಯಸ್ಸಂಪಾದನೆ ಮಾಡಿಕೊಳ್ಳಬೇಕಾದರೆ ಮಿಕ್ಕರ್ಧವನ್ನು ಮರೆಯದೆ ಜೊತೆಗೂಳಿಸಿಕೊಳ್ಳಬೇಕು. ಆ ಉಳಿದರ್ಧ ತತ್ತ್ವವೇನೆಂದರೆ—ಪ್ರಜೆ ತನ್ನ ಆ ಮಹಿಮೆಗೆ ತಕ್ಕ ಯೋಗ್ಯತೆಯನ್ನು ಸಂಪಾದಿಸಿಕೊಳ್ಳಬೇಕೆಂಬುದು; ತನ್ನನ್ನು ತಾನು ತಿದ್ದಿಕೊಂಡು ಹದ್ದಿನಲ್ಲಿರಿಸಿಕೊಳ್ಳಬೇಕೆಂಬುದು. ಪ್ರಜೆಗೆ ಹಕ್ಕುಂಟು; ಅರ್ಹತೆಯುಂಟೋ? ತಂದೆಯ ಕಾಲಾನಂತರ ಆತನ ಸ್ವತ್ತನ್ನು ಪಡೆದುಕೊಳ್ಳಲು ಮಗನಿಗೆ ಹಕ್ಕುಂಟು; ಅದನ್ನು ನಿರ್ವಾಹಮಾಡಲು ಅವನಿಗೆ ಯೋಗ್ಯತೆಯುಂಟೋ? ಮನೆಯ ಯಜಮಾನನಿಗೆ ತನ್ನ ಮನೆಯಲ್ಲಿ ಅಡಿಗೆ ಮಾಡಿದ್ದ ಆಹಾರವನ್ನೆಲ್ಲಾ ತಾನೊಬ್ಬನೇ ತಿಂದುಬಿಡಲು ಹಕ್ಕುಂಟು; ಅದನ್ನು ಜೀರ್ಣಿಸಿಕೊಳ್ಳಲು ಶಕ್ತಿಯುಂಟೋ? ಹೀಗೆ ಹಕ್ಕು ಬೇರೆ, ಯೋಗ್ಯತೆ ಬೇರೆ. ಪ್ರಜೆಯು ತನ್ನ ಹಕ್ಕೇ ತನ್ನ ಯೋಗ್ಯತೆಯೆಂದು ಭಾವಿಸುವ ಪಕ್ಷದಲ್ಲಿ ತನ್ನ ಹಣದ ಬಲವೇ ತನ್ನ ಹೊಟ್ಟೆಯ ಬಲವೆಂದು ತಿಳಿಯುವ ತಿಂಡಿಪೋತನ ಪಾಡು ಆ ಪ್ರಜೆಗೆ ತಪ್ಪದು.

ಪ್ರಜೆಯೆಂದರೆ ಕೋಟ್ಯಂತರ ಜನವಲ್ಲವೆ? ಆ ಜನತೆಯ ಕೂಡುಬದುಕಿನ ಒಂದು ದೊಡ್ಡ ರೂಪವೇ ರಾಜ್ಯ. ಆ ಜನದೊಟ್ಟಿನ ದೃಷ್ಟಿಯಿಂದ ಅವರಲ್ಲಿ ಪ್ರತಿಯೊಬ್ಬ ಬಿಡಿ ಗಂಡಸೂ ಪ್ರತಿಯೊಬ್ಬ ಬಿಡಿ ಹೆಂಗಸೂ ರಾಜ್ಯಕ್ಕೆ ಒಂದು ಮೂಲಾಂಗ. ಅಂಥ ಒಬ್ಬೊಬ್ಬ ವ್ಯಕ್ತಿಯೂ ರಾಷ್ಟ್ರಕ (ಸಿಟಿಜ಼ನ್). ಪ್ರಜೆಯೊಬ್ಬನು ತನ್ನಂಥವರೆಲ್ಲರ ಒಟ್ಟನ್ನು ಸಮೂಹವಾಗಿ ಕಂಡಾಗ ಅದು ರಾಜ್ಯ, ಅಥವಾ ರಾಷ್ಟ್ರ. ಆ ಜನದೊಟ್ಟು ಅಥವಾ ರಾಜ್ಯ ಆ ಪ್ರಜೆಯನ್ನು ಬೇರೆ ಬೇರೆಯಾಗಿ ನೋಡಿದಾಗ ಅವರು ರಾಷ್ಟ್ರಕರು. ತೋಟದಲ್ಲಿ ಗಿಡ ಹೇಗೋ, ಗೋಡೆಯಲ್ಲಿ

ಇಟ್ಟಿಗೆ ಹೇಗೋ, ಕೈಯಲ್ಲಿ ಬೆರಳು ಹೇಗೋ ರಾಜ್ಯದಲ್ಲಿ ರಾಷ್ಟ್ರಕನು ಹಾಗೆ—ಆ ಸಮಗ್ರವಸ್ತುವಿನ ಏಕಮಾನ (ಯೂನಿಟ್). ರಾಜ್ಯದ ಬಲಾಬಲಗಳು ರಾಷ್ಟ್ರಕನ ಬಲಾಬಲ ಗಳಂತೆ ಇರುತ್ತವೆ.

ರಾಜ್ಯದ ಜೀವಾಳ ಪ್ರಜಾತತ್ತ್ವ; ಪ್ರಜೆಯ ಜೀವಾಳ ರಾಷ್ಟ್ರಕಸತ್ತ್ವ. ಪೂರ್ವಕಾಲದ ರಾಜ್ಯ ಜೀವನದಲ್ಲಿ ರಾಜನೆಂಬ ಸರ್ವಾಧಿಕಾರಿಗಿದ್ದ ಸ್ಥಾನ ಈ ದಿವಸ ರಾಜ್ಯದಲ್ಲಿ ರಾಷ್ಟ್ರಕನಿಗೆ ದೊರೆತಿದೆ. ಅವನ ಆರ್ಹತೆಗೆ ತಕ್ಕಂತೆ ಅದರ ಗತಿ.

ರಾಜ್ಯದ ಮುಖ್ಯೋದ್ದೇಶ ಇಮ್ಮಗವಾದದ್ದು : (೧) ದೇಶ ವನ್ನು ಶತ್ರುಗಳಿಂದ ಕಾಪಾಡುವುದು, (೨) ನ್ಯಾಯವನ್ನು ನಡಸಿಕೊಡುವುದು.

ಈ ಎರಡರಲ್ಲಿ ಮೊದಲನೆಯದು—ದೇಶರಕ್ಷಣೆಯೂ, ಅದ ಕ್ಕಾಗಿ ಸೈನಸಿದ್ಧತೆಯೂ—ಚೆನ್ನಾಗಿ ನೆರವೇರಲು ಎರಡು ತೆರದ ಅನುಕೂಲತೆಗಳಾಗಬೇಕು : (೧) ಜನದಲ್ಲಿ ಬಲಸಂಪತ್ತು ಗಳಿರಬೇಕು; (೨) ಅವರಲ್ಲಿ ಅನ್ಯೋನ್ಯ ವಿರೋಧಗಳಿಲ್ಲದೆ ಐಕಮತ್ಯವಿರಬೇಕು. ಈ ಎರಡನೆಯ ಅನುಕೂಲತೆಯುಂಟಾ ಗಲು ಜನದ ಅನ್ಯೋನ್ಯ ವ್ಯವಹಾರಗಳಲ್ಲಿ ನ್ಯಾಯನಿಷ್ಕರ್ಷೆಯಿರ ಬೇಕು. ಹೀಗೆ ನ್ಯಾಯಸ್ಥಾಪನರೂಪವಾದ ರಾಜ್ಯೋದ್ದೇಶವು ದೇಶರಕ್ಷಣರೂಪವಾದ ರಾಜ್ಯೋದ್ದೇಶಕ್ಕೆ ಸಹಕಾರಿಯಾಗಿರು ತ್ತದೆ. ನ್ಯಾಯಕ್ಕಾಗಿ,—ಮತ್ತು ನ್ಯಾಯದಿಂದ,—ಜನತೆಯಲ್ಲಿ ಐಕಮತ್ಯ.

ದೇಶರಕ್ಷಣೆಗೆ ಅವಶ್ಯವಾದ ಇನ್ನೊಂದು ಅನುಕೂಲತೆ ಪ್ರಜೆಯ ಬಲಸಂಪತ್ತುಗಳ ಅಭಿವೃದ್ಧಿ. ಈ ಕಾರಣದಿಂದಲೂ, ಮತ್ತು ಶತ್ರುಭಯವಿಲ್ಲದಿರುವ ಕಾಲದಲ್ಲಿಯೂ ಪ್ರಜಾಸಂತೃ ಪ್ತಿಯು ರಾಜ್ಯಕ್ಕೆ ಕರ್ತವ್ಯವಾದ ಕಾರಣದಿಂದಲೂ ಪ್ರಜಾ ಸ್ವಾಸ್ಥ್ಯವನ್ನೂ (ವೆಲ್‌ಫೇರ್) ರಾಜ್ಯದ ಮುಖ್ಯೋದ್ದೇಶವಾಗಿ

ಅಂಗೀಕರಿಸುವುದು ಈಗ ಪದ್ಧತಿಯಾಗಿದೆ. ಹೀಗೆ ಈಗಿನ ರಾಜ್ಯೋದ್ದೇಶಗಳು ಮೂರು—

(೧) ದೇಶಸಂರಕ್ಷಣೆ,
(೨) ನ್ಯಾಯಸ್ಥಾಪನೆ,
(೩) ಸ್ವಾಸ್ಥ್ಯಸಾಧನೆ.

ಈ ಮೂರರಲ್ಲಿ ಎರಡನೆಯದೇ ಹೆಚ್ಚು ತೊಡಕಿನ ಪ್ರಶ್ನೆ—ನ್ಯಾಯವೆಂದರೇನು ?

## ನ್ಯಾಯವೆಂದರೆ

ನ್ಯಾಯವೆಂದರೆ—ಈ ಲೋಕದ ನಾನಾ ವಸ್ತು ಸಂಪತ್ತುಗಳಲ್ಲಿ ಯಾವ್ಯಾವುದು ಯಾರ್ಯಾರಿಗೆ ಎಷ್ಟೆಷ್ಟು ಸೇರತಕ್ಕದ್ದೋ ಅವರವರಿಗೆ ಅದದನ್ನು ಅಷ್ಟಷ್ಟುಮಟ್ಟಿಗೆ ಸಲ್ಲಿಸುವ ಕಟ್ಟುಪಾಡು ಎಂದು ಹೇಳಬಹುದು. ಆದರೂ ಪ್ರಶ್ನೆಗೆ ಉತ್ತರವನ್ನು ಇನ್ನೂ ಹುಡುಕಬೇಕಾಗಿದೆ. ಯಾರ್ಯಾರಿಗೆ ಯಾವ ಯಾವ ವಸ್ತು ಎಷ್ಟೆಷ್ಟುಮಟ್ಟಿಗೆ ಸೇರಿದ್ದು, ಸೇರತಕ್ಕದ್ದು—ಎಂಬುದನ್ನು ಗೊತ್ತುಮಾಡುವವರು ಯಾರು ? ಗೊತ್ತುಮಾಡುವುದು ಹೇಗೆ ?

ನ್ಯಾಯವೆಂಬುದು ಲೋಕದಲ್ಲಿಲ್ಲದ ವಸ್ತುವೇನೂ ಅಲ್ಲ. ಅದನ್ನು ಲೋಕದ ಹೊರಗಿನಿಂದ ಎಲ್ಲಿಂದಲೋ ನಾವು ತಂದುಕೊಳ್ಳಬೇಕಾಗಿಲ್ಲ. ಅದು ನಮ್ಮ ನಮ್ಮ ಒಳಗಡೆಯೇ ಸೂಕ್ಷ್ಮವಾಗಿ ಅಡಗಿಕೊಂಡಿದೆ.

ಪ್ರತಿಯೊಂದು ಪ್ರಾಣಿಯಲ್ಲಿಯೂ "ನಾನು," "ನಾನು" ಎಂದು ಹೇಳಿಕೊಳ್ಳುವ ಒಂದು ಜೀವತತ್ತ್ವವಿರುತ್ತದೆಂಬುದು ಎಲ್ಲರಿಗೂ ಅನುಭವದಲ್ಲಿರುವ ಸಂಗತಿ. ಆ ತತ್ತ್ವವೇ ಆತ್ಮ. ಆ ಆತ್ಮವೇ ದೇಹಸಮೇತವಾಗಿ ಲೋಕದಲ್ಲಿ ಬದುಕುವಾಗ ಜೀವ ಎನ್ನಿಸಿಕೊಳ್ಳುತ್ತದೆ. ಪ್ರತಿಯೊಂದು ಜೀವದಲ್ಲಿಯೂ

ಕೆಲವು ಗುಣಗಳು ಸೃಷ್ಟಿಯಿಂದಲೇ ಬೆರೆತುಕೊಂಡು ಒಂದಿರುತ್ತವೆ. ಆ ಗುಣಗಳು ಮೂರು—ಸತ್ತ್ವ, ರಜಸ್ಸು, ತಮಸ್ಸು. ಜೀವವು ಅನಾದಿಯಾದರೂ ಅದರ ಗುಣಗಳು ಜನ್ಮ ಜನ್ಮಾಂತರ ಸಂಸ್ಕಾರಗಳಿಂದ ಒಡಲಾಯಿಸುತ್ತಿರುತ್ತವೆ. ಇಂಥ ಒಡಲಾವಣೆಗಳು ಎಷ್ಟೆಷ್ಟು ನಡೆದರೂ ಜೀವಸ್ವಭಾವದಲ್ಲಿ ಯಾವ ಒಂದು ಗುಣ ಬೀಜವೂ ಸಾಮಾನ್ಯವಾಗಿ ಸಂಪೂರ್ಣ ನಾಶವಾಗಲಾರದು. ಆ ಮೂರೂ ಮಿಶ್ರಿತವಾಗಿಯೇ ಇರುತ್ತವೆ. ಆದರೆ ಅವುಗಳ ಅನ್ಯೋನ್ಯ ಪರಿಮಾಣದಲ್ಲಿ ಹೆಚ್ಚು ಕಡಮೆಗಳಾಗಿರುತ್ತವೆ.

ಸತ್ತ್ವವೆಂದರೆ—ತಿಳಿವು, ಬೆಳಕು, ಶಾಂತಿ.

ರಾಜಸವೆಂದರೆ—ಆಶೆ, ಝಳ, ಭ್ರಾಂತಿ.

ತಾಮಸವೆಂದರೆ—ಅಜ್ಞಾನ, ಮಬ್ಬು, ಜಡತೆ.

ಇವುಗಳ ವರ್ಣನೆಯನ್ನು ಭಗವದ್ಗೀತೆಯ ೧೪ ನೆಯ ಅಧ್ಯಾಯದಲ್ಲಿ ಕಾಣಬಹುದು.

ಈ ಮೂರು ಗುಣಗಳೂ ಸಾಮಾನ್ಯ ಮನುಷ್ಯರಲ್ಲಿ ಬೆರೆತುಕೊಂಡೇ ಇರುತ್ತವೆ. ಕೆಲವರಲ್ಲಿ ಸತ್ತ್ವ ಹೆಚ್ಚಾಗಿ, ಕೆಲವರಲ್ಲಿ ರಾಜಸ ಹೆಚ್ಚಾಗಿ, ಕೆಲವರಲ್ಲಿ ತಾಮಸ ಹೆಚ್ಚಾಗಿ—ಏವಂ ಚ ಮಿಕ್ಕೆರಡರೊಡನೆ ಕೂಡಿ ಕಲೆತಿರುತ್ತವೆ.

ಸತ್ತ್ವಗುಣವು ಜೀವವನ್ನು ಅಂತರಾತ್ಮದ ಕಡೆಗೆ ಪ್ರೇರಿಸುತ್ತದೆ. ತಾಮಸವು ಜೀವವನ್ನು ಅಂತರಾತ್ಮದಿಂದ ದೂರ ಮಾಡಿಸುತ್ತದೆ. ಸಾತ್ತ್ವಿಕತೆಯ ಪರಮ ಲಾಭವು ಅಂತರಾತ್ಮದ ಸಂಪೂರ್ಣ ದರ್ಶನ ಅಥವಾ ಮೋಕ್ಷ. ಹೀಗೆ ಜೀವಿಗೆ ಪರಮಾತ್ಮ ವಸ್ತುವನ್ನು ನೆನಪಿಗೆ ತಂದು, ಅವನ ಸ್ವಾರ್ಥತೆಗೆ ಮಿತಿಯಿಟ್ಟು, ಅನ್ಯಜೀವಿಗಳ ವಿಷಯದಲ್ಲಿ ಅವನಿಗೆ ಸಹಾನುಭೂತಿ ಸಹಭಾಗಿತೆಗಳನ್ನು ಕಲಿಸುವುದು ಸತ್ತ್ವಗುಣ. ಈ ಸಹಜ ಸಾತ್ತ್ವಿಕಾಂಶವೇ ನ್ಯಾಯಬೀಜ. ಅದೇ ಧರ್ಮಮೂಲ (ಪುಟ ೩೬-೪೨). ಜೀವಿಯ ಬುದ್ಧಿಯು ಸತ್ತ್ವ

ಗುಣದೊಡನೆ ಬೆರೆತಾಗ ಅವನಿಗೆ ಲೋಕದ ವಿಷಯದಲ್ಲಿಯೂ ತನಗೆ ಲೋಕಸಂಬಂಧದಲ್ಲಿರುವ ಕರ್ತವ್ಯದ ವಿಷಯದಲ್ಲಿಯೂ ಸರಿಯಾದ ತಿಳಿವಳಿಕೆಯುಂಟಾಗುತ್ತದೆ. ಆ ತಿಳಿವಳಿಕೆಯೇ ಋತ.

ಮನುಷ್ಯನಿಗೆ ಯಾವುದಾದರೊಂದು ತೆರದಲ್ಲಿ ಪ್ರಪಂಚದ ಸಂಪರ್ಕವಾದೊಡನೆಯೆ,—ಪ್ರಪಂಚದ ಆಕರ್ಷಣೆ ಆಶೆಗಳಿಗೆ ಅವನು ಸಿಕ್ಕುವ ಮುನ್ನ,—ಎಂದರೆ ಕ್ಷಣಮಾತ್ರ—ಆ ಸನ್ನಿವೇಶದ ವಾಸ್ತವ ಸ್ವಭಾವವು ಅವನ ಅಂತರಂಗದಲ್ಲಿ ಹೊಳೆಯುತ್ತದೆ, ಮತ್ತು ಆ ಸನ್ನಿವೇಶದಲ್ಲಿ ತಾನು ಹೇಗೆ ನಡೆದುಕೊಳ್ಳಬೇಕೆಂಬುದೂ ತೋರುತ್ತದೆ. ಈ ಅಂತಃಸ್ಫೂರ್ತಿಯು ಸತ್ತ್ವಗುಣದಿಂದಾಗತಕ್ಕದ್ದು. ಅದೇ ಋತ. ಅದೇ ಧರ್ಮೇಂದ್ರಿಯ. ಅದಕ್ಕೆ ಇಂಗ್ಲಿಷಿನಲ್ಲಿ "ಕಾನ್‌ಷನ್ಸ್" (Conscience) ಎಂದು ಹೆಸರು.

## ಋತ

ಋತವೆಂಬ ಧರ್ಮೇಂದ್ರಿಯ ಸ್ಫೂರ್ತಿ ಮಿಂಚಿನಂಥಾದ್ದು; ಅದು ಒಂದು ಕ್ಷಣವಿರದು. ಅದು ಪೂರ್ವಜನ್ಮ ಸಂಸ್ಕಾರಗಳ ಫಲವೆಂದು ಮೇಲೆ ಸೂಚಿಸಿದ್ದಾಗಿದೆ. ಒಬ್ಬ ಮನುಷ್ಯ ಎತ್ತರದಿಂದ ಕಾಲುತಪ್ಪಿ ಕೆಳಕ್ಕೆ ಬಿದ್ದಾಗ ನೆಲಮುಟ್ಟುತ್ತಲೆ ಮೊದಲು ಕೈಯನ್ನು ನೆಲದ ಮೇಲೆ ಊರುತ್ತಾನೆ. ಅದರಿಂದ ಅವನ ಕಣ್ಣಿಗೂ ತಲೆಗೂ ಪೆಟ್ಟಾಗುವುದು ತಪ್ಪುತ್ತದೆ. ಈ ಉಪಾಯ ಅವನು ಆಲೋಚನೆ ಮಾಡಿ ಕಂಡುಕೊಂಡದ್ದಲ್ಲ; ಅವನಿಗೆ ಆಲೋಚನೆ ಮಾಡಲು ಆಗ ಪುರಸತ್ತಿರದು. ಅದು ತಾನಾಗಿ ಒಳಗಿನಿಂದ ಹೊಳೆದದ್ದು. ಆ ತಾತ್‌ಕ್ಷಣಿಕ ಸ್ಫೂರ್ತಿಯಂಥಾದ್ದು ಋತ. ನಾವು ವಿಶ್ರಾಂತಿಗೆಂದು ಕುಳಿತಿರುವಾಗ ಸೊಳ್ಳೆಯೋ ನೊಣವೋ ನಮ್ಮ ಕಣ್ಣಒಳಿ ಹಾರಿಬರುತ್ತದೆ; ಕೂಡಲೇ ಕಣ್ಣು ರೆಪ್ಪೆ ಮುಚ್ಚುತ್ತದೆ. ಅದು ನಮ್ಮ ಯುಕ್ತಾಯುಕ್ತ ವಿವೇಚನೆಯ ಪರಿಣಾಮವಲ್ಲ. ಆ ಅಪಾಯ ಸೂಚನೆಯಾಗಲಿ

ಅದರ ನಿವಾರಣೆಯಾಗಲಿ ನಮಗೆ ಮೊದಲು ತಿಳಿದಿರುವುದೇ ಇಲ್ಲ. ಸಂಗತಿ ನಡೆದ ಮೇಲೆಯೇ ನಮಗದು ಗೋಚರವಾಗುವುದು. ಆ ಕಣ್ಣಿನ ಸ್ವಸಂರಕ್ಷಣೆ ಅಂತಃಸ್ಫುರಣೆಯ ಕೆಲಸ. ಅದು ಲೋಕಾನುಭವವೂ ಅಭ್ಯಾಸವೂ ಇಲ್ಲದ ಎಳೆಮಕ್ಕಳಲ್ಲಿಯೂ ನಡೆಯುತ್ತದೆ. ಅದು ಹಿಂದಣ ಜನ್ಮಗಳಿಂದ ಒಂದ ವಾಸನಾ ವಿಶೇಷದ ಕಾರ್ಯ. ಅದೇ ಮತ. ಮನುಷ್ಯ ಬುದ್ಧಿಗೆ ಸೈಜವಾಗಿ ಪ್ರಥಮದಲ್ಲಿ ಉಂಟಾದ ವಸ್ತುಸ್ವಭಾವ ಭಾಸವೇ ಮತ್ತು ಕಾರ್ಯಾಕಾರ್ಯ ಪ್ರೇರಣೆಯೇ ಮತ.

ಮತದಲ್ಲಿ ನಾಲ್ಕು ಅಂಶಗಳು ಸೇರಿಕೊಂಡಿರುತ್ತವೆ:—

(೧) ಯಥಾರ್ಥ ಕುತೂಹಲ,

(೨) ,, ಗ್ರಹಣ,

(೩) ,, ಅನುವರ್ತನ,

(೪) ,, ಪ್ರತಿವರ್ತನೆಯ ಫಲಾಫಲಗಳು.

ಯಥಾರ್ಥವೆಂದರೆ (ಯಥಾ+ಅರ್ಥ) ಒಂದಾನೊಂದು ವಸ್ತು ಅಥವಾ ಸಂಗತಿ ಹೇಗಿದೆಯೋ ಹಾಗೆ ಅದನ್ನು ಕಂಡುಕೊಳ್ಳುವುದು. ನಾವು ಕತ್ತಲಿನಲ್ಲಿ ಹೋಗುತ್ತಿರುವಾಗ ಒಂದು ಮೋಟು ಮರವನ್ನು ಕೊಂಚ ದೂರದಿಂದ ಕಂಡು ಅದು ಒಬ್ಬ ಮನುಷ್ಯನೆಂದು ತಿಳಿದುಕೊಳ್ಳಬಹುದು. ಹತ್ತಿರ ಹತ್ತಿರ ಹೋಗುತ್ತ ಅದು ಮನುಷ್ಯನಲ್ಲ, ಅದು ಕಲ್ಲುಕಂಬವೇನೋ ಎಂದು ಅನುಮಾನಿಸಬಹುದು. ಕಡೆಗೆ ಅದನ್ನು ಕೈಯಿಂದ ಮುಟ್ಟಿದಾಗ ಅದು ಒಣ ಈಚಲು ಮರದ ಮುಂಡವೆಂದು ನಿಶ್ಚಯಿಸಿಕೊಳ್ಳಬಹುದು. ಹೀಗಾದ ನಿಶ್ಚಯವೇ ಯಥಾರ್ಥ.

ಯಥಾರ್ಥದ ಮೇಲಣ ಒಲವೇ—ಯಥಾರ್ಥವನ್ನು ತಿಳಿದುಕೊಳ್ಳಬೇಕೆಂಬ ಕುತೂಹಲವೇ—ಎಲ್ಲಕ್ಕೂ ಮೊದಲು. ಅದಿಲ್ಲದಿದ್ದರೆ ಮತವೂ ಇಲ್ಲ, ಆಮೋಲಿನದೂ ಇಲ್ಲ. ತನ್ನೊಬ್ಬನ

ಕ್ಷೇಮಕ್ಕೋಸ್ಕರವಾಗಿಯಾದರೂ ಮನುಷ್ಯನು ಇರುವ ಸಂದರ್ಭವನ್ನು ಇರುವಂತೆ ತಿಳಿದುಕೊಳ್ಳಬೇಕೆಂದು ಅಪೇಕ್ಷಿಸಲ್ಪಡುತ್ತಾನೆ. ಮನುಷ್ಯನನ್ನು ಮರವೆಂದು ತಿಳಿದರೂ ಮರವನ್ನು ಮನುಷ್ಯನೆಂದು ತಿಳಿದರೂ ಹಾಗೆ ತಿಳಿದವನಿಗೆ ಕಷ್ಟ. ಆದ ಕಾರಣ ಸ್ವಪ್ರಯೋಜನಕ್ಕಾಗಿಯಾದರೂ ಯಥಾರ್ಥ ಜ್ಞಾನ ಅವನಿಗೆ ಅವಶ್ಯ.

ಕುತೂಹಲದ ತರುವಾಯ ಅನ್ವೇಷಣೆ. ಯಥಾರ್ಥ ಜ್ಞಾನವು ಎಲ್ಲಿಯೂ ಸಿದ್ಧವಾಗಿ ದೊರೆಯುವುದಿಲ್ಲ. ಅದನ್ನು ಹುಡುಕಿಯೇ ಸಂಪಾದಿಸಿಕೊಳ್ಳಬೇಕು. ಅದಕ್ಕಾಗಿ ನಾಲ್ಕಾರು ಬಗೆಯ ಪರೀಕ್ಷೆಗಳೂ ಅನುಮಾನಗಳೂ ತರ್ಕಗಳೂ ಅವಶ್ಯವಾಗುತ್ತವೆ. ಮೇಲೆ ತೋರಿಸಿರುವಂತೆ ಯಥಾರ್ಥ ಸಂಪಾದನೆ ತ್ರಿಸ್ಥಾಯಿಗಳಲ್ಲಿ ಅಥವಾ ಮೂರು ಅಂತಸ್ತುಗಳಲ್ಲಿ ನಡೆಯಬೇಕಾಗುತ್ತದೆ: (೧) ಆಪಾತದರ್ಶನ; (ಮೊದಮೊದಲಿನ ನೋಟ; ಮೇಲ್ಮೇಲಿನ ಅನುಭವ). (೨) ಪೂರ್ವಾಪರವಿಚಾರ; (ಹಿಂದು ಮುಂದೆ ನೋಡಿ ಕಾರ್ಯಕಾರಣ ಸಂಬಂಧಗಳನ್ನು ವಿಮರ್ಶಿಸಿ ಚರ್ಚಿಸುವುದು). (೩) ಆ ಮೇಲೆ ಯಥಾರ್ಥ ನಿರ್ಣಯ (ಸಿದ್ಧಾಂತ). ಅದೇ ಸತ್ಯ.

ಯಥಾರ್ಥ ದರ್ಶನದಿಂದ ಯಥಾರ್ಥಕ್ಕೆ ಪ್ರತ್ಯುತ್ತರರೂಪವಾದ ವರ್ತನೆ. ಯಥಾರ್ಥ ತಿಳಿದುಬಂದ ಮೇಲೆ ಅದು ತನಗೆ ಪ್ರತಿಕೂಲವಾಗಿದ್ದಲ್ಲಿ ಅದನ್ನು ತಿದ್ದುವುದಕ್ಕಾಗಲಿ ಅದುಮಿ ಮುಚ್ಚಿಡುವುದಕ್ಕಾಗಲಿ ಪ್ರಯತ್ನಿಸುವುದೋ, ಅಥವಾ ಅದಕ್ಕೆ ತಕ್ಕಂತೆ ತನ್ನ ನಡವಳಿಕೆಯನ್ನು ತಾನು ಗೊತ್ತುಮಾಡಿ ತಿದ್ದಿಕೊಳ್ಳುವುದೋ ಅವಶ್ಯವಾಗುತ್ತದೆ. ಯಥಾರ್ಥಕ್ಕೆ ಅನುಗುಣವಾದ ವರ್ತನೆಯೇ ಧರ್ಮ. ಅದೂ ಋತದಲ್ಲಿ ಸೇರಿದೆ.

ಋತವಿಹಿತವಾದ ಅಥವಾ ಋತವಿರೋಧಿಯಾದ ಚರ್ಯೆಯೇ ಪುಣ್ಯ ಅಥವಾ ಪಾಪ. ಈ ಕರ್ಮ ಪಾಕದಿಂದ ಫಲಿಸುವ ಹಿತಾಹಿತಗಳನ್ನೂ ಋತವೆಂದು ಕರೆಯುವುದುಂಟು.

ಹೀಗೆ ಪ್ರತಿಯೊಬ್ಬ ಮಾನವ ಪ್ರಾಣಿಯಲ್ಲಿಯೂ ಸಹಜವಾಗಿರುವ ಒಂದು ಅಂತಸ್ಸತ್ತ್ವದ ಸ್ಫೂರ್ತಿಯು ಮೊದಲು ಋತವಾಗಿ, ಬಳಿಕ ಸತ್ಯವಾಗಿ, ತರುವಾಯ ಧರ್ಮವಾಗಿ ವಿಕಸಿಸುತ್ತದೆ. ಅದೇ ನ್ಯಾಯಮೂಲ.

ನಮ್ಮ ಅಂತರಂಗದಲ್ಲಿ ಮಿಂಚಿನಂತೆ ಕ್ಷಣಮಾತ್ರ ಹೊಳೆದ ಋತವನ್ನು ಉತ್ತರ ಕ್ಷಣದಲ್ಲಿ ಜಗತ್ತು ಆವರಿಸಿಕೊಳ್ಳುತ್ತದೆ. ಜಗತ್ತು ಋತಕ್ಕೆ ಸಾಧಕವಾಗುವುದೂ ಉಂಟು. ಬಾಧಕವಾಗುವುದೂ ಉಂಟು. ಅಂತಃಸ್ಫೂರ್ತಿಯಾದ ಋತವನ್ನು ಬಹಿರ್ಲೋಕದ ಸಂಗತಿಗಳೊಡನೆ ಜೋಡಿಸಿ, ಹೋಲಿಸಿ, ತರ್ಕ ಮಾಡಿ ಪರಿಷ್ಕಾರಗೊಳಿಸಿದಾಗ ಅದು ಸತ್ಯವಾಗುತ್ತದೆ. ಅಂತಸ್ಸಾಕ್ಷಿಗೆ ದೊರೆತದ್ದು ಋತ. ಅದು ಬಹಿಸ್ಸಾಕ್ಷಿಯಿಂದ ಪರಿಷ್ಕಾರ ಪಡೆದ ಮೇಲೆ ಸತ್ಯವಾಗುತ್ತದೆ.

ಆ ಸತ್ಯವನ್ನು ನಮ್ಮ ಲೋಕವ್ಯವಹಾರಗಳಿಗೆ ಅನ್ವಯಿಸಿದಾಗ ಅದು ಧರ್ಮವಾಗುತ್ತದೆ. ಧರ್ಮದ ಒಂದು ರೂಪವೇ ನ್ಯಾಯ. ಮನುಷ್ಯರ ಅನ್ಯೋನ್ಯ ಸಂಬಂಧ ಕ್ಷೇತ್ರಗಳಲ್ಲಿ ಸತ್ಯವನ್ನನುಸರಿಸಿ ನಡೆದಾಗ ಆಗುವ ಧರ್ಮವೇ ನ್ಯಾಯ. ಎಂದರೆ ಯಥಾರ್ಥವಾಗಿ ಯಾರ್ಯಾರಿಗೆ ಯಾವಯಾವುದು ಸೇರಿದ್ದೋ ಅವರವರಿಗೆ ಅದನ್ನು ಸಲ್ಲಿಸುವುದು ನ್ಯಾಯ.

## ನ್ಯಾಯ ನೈಜವಾದದ್ದು

ನ್ಯಾಯಕ್ಕೆ ಲೋಕ ತಾನಾಗಿ ಗೌರವ ತೋರುತ್ತದೆ. ದೇವರೆಂದರೆ ತಲೆಬಾಗದವರು ಕೂಡ ನ್ಯಾಯವೆಂದರೆ ತಲೆಬಾಗುತ್ತಾರೆ. ನ್ಯಾಯವೆಂಬುದು ಒಂದು ಸರ್ವಜನ ವಿದಿತವಾದ ಏರ್ಪಾಟು. ಅದರ ಲಕ್ಷಣವೇನೆಂದು ಕೇಳಿದರೆ ವಿವರಿಸಲು ಶಕ್ತಿಯಿಲ್ಲದವರು ಸಹ ಅದು ಇರುವ ಸಂದರ್ಭವನ್ನೂ ಇಲ್ಲದ ಸಂದರ್ಭವನ್ನೂ ಗುರುತಿಸಬಲ್ಲವರಾಗಿರುತ್ತಾರೆ. "ನ್ಯಾಯ ತನಗೆ ಬೇಕಾದದ್ದು," "ನ್ಯಾಯ ತನಗೆ ಸಂಬಂಧಪಟ್ಟದ್ದು" ಎಂದು

ಪ್ರತಿಯೊಬ್ಬನೂ ಅದರಲ್ಲಿ ಒಂದು ಆತ್ಮೀಯತೆಯನ್ನು ತೋರಿಸುತ್ತಾನೆ. ನ್ಯಾಯಾಂಕುರವು ಪ್ರತಿಯೊಂದು ಮಾನವ ಹೃದಯದಲ್ಲಿಯೂ ನೈಜವಾಗಿರುವ ಕಾರಣದಿಂದಲೇ ಅದಕ್ಕೆ ಲೋಕದಲ್ಲಿ ಸ್ವತಸ್ಸಿದ್ಧವಾದ ಪುರಸ್ಕಾರ. ಲೋಕವು ರಾಜ್ಯದ ನ್ಯಾಯ ವ್ಯವಸ್ಥೆಯಲ್ಲಿ ತನ್ನ ಅಂತರಂಗದೊಳಗಣ ಋತದ ಪ್ರತಿಬಿಂಬವನ್ನು ಕಾಣುತ್ತದೆ. ಆದದ್ದರಿಂದಲೇ ರಾಜ್ಯಶಾಸನಕ್ಕೆ ಲೋಕದ ಸಿದ್ಧ ವಿಧೇಯತೆ. ನ್ಯಾಯಬೀಜವು ಮನುಷ್ಯನಲ್ಲಿ ಪ್ರಕೃತಿ ಜನ್ಯವಾಗಲ್ಲದೆ ಕೃತಕವಾಗಿದ್ದ ಪಕ್ಷದಲ್ಲಿ, ರಾಜ್ಯವೆಂಬ ಏರ್ಪಾಟೂ ನ್ಯಾಯವೆಂಬ ಕಟ್ಟುಪಾಡೂ ಈಗಿನಷ್ಟು ಸುಲಭವಾಗಿ ನಡೆಯುತ್ತಿರಲಿಲ್ಲ. ಆದದ್ದರಿಂದ ನ್ಯಾಯದ ಸ್ವರೂಪವನ್ನು ತಿಳಿಯಬೇಕೆನ್ನುವವರು ಲೋಕಹೃದಯದಲ್ಲಿ ಅಂತರ್ಗತವಾಗಿರುವ ಋತವನ್ನು ಪ್ರಕಾಶಕ್ಕೆ ತರಬೇಕು. ಅದಕ್ಕಾಗಿಯೇ ಸಭೆ ಸಂಸತ್ತುಗಳ ಏರ್ಪಾಟು. ಒಂದು ವಿಷಯವನ್ನು ನೂರಾರು ಮಂದಿ ಸೇರಿ ಚರ್ಚೆಮಾಡುವಲ್ಲಿ ಪ್ರತಿಯೊಂದು ವಾದವೂ ಪ್ರತಿವಾದವೂ ಮಥನಕ್ಕೆ ಸಿಕ್ಕುತ್ತದೆ. ನೂರು ಮಂದಿಯಲ್ಲಿ ಹತ್ತು ಮಂದಿಯಾದರೂ ಯಥಾರ್ಥದರ್ಶಿಗಳಿದ್ದಾರು. ಅವರಿಂದಲಾದರೂ ಉಳಿದವರ ಮಾತು ಪರೀಕ್ಷೆಗೆ ಬಂದೀತು. "ವಾದೇ ವಾದೇ ಜಾಯತೇ ತತ್ತ್ವಬೋಧಃ." ಹೀಗೆ ಪ್ರಕಾಶವಾಗಿ ನಡೆಯುವ ತರ್ಕ ಪರ್ಯಾಲೋಚನೆಗಳಿಂದ ಸತ್ಯ ಸಿದ್ಧಾಂತವಾಗಿ, ಅದು ನ್ಯಾಯಕ್ಕೆ ಆಧಾರವಾದೀತು—ಎಂಬುದು ಪ್ರಜಾಪಕ್ಷವಾದಿಗಳ ವಿಶ್ವಾಸ. ಅದರಿಂದಲೇ ಮಹಾಜನ ವಾಕ್ಯಕ್ಕೆ ಗೌರವ.

ಧರ್ಮಸ್ಯ ತತ್ತ್ವಂ ನಿಹಿತಂ ಗುಹಾಯಾಮ್ |
ಮಹಾಜನೋ ಯೇನ ಗತಃ ಸ ಪಂಥಾಃ ||

ನ್ಯಾಯಬೀಜವು ಸಮಾಜದ ಹೃದಯ ಗುಹೆಯಲ್ಲಡಗಿರುತ್ತದೆ. ಪಾರ್ಲಿಮೆಂಟಿನಂಥ ಮಹಾಜನ ಪರಿಷತ್ತಿನಲ್ಲಿ ಅದು ಮೊಳೆತು ಬೆಳೆದು ಸಫಲವಾಗುತ್ತದೆ. ರಾಜ್ಯಶಾಸನವು ನ್ಯಾಯ

ದರ್ಶಿಗಳ ಧ್ವನಿ; ಪ್ರಜೆಯ ಅಂಗೀಕಾರವು ಪ್ರತಿಧ್ವನಿ. ಪ್ರಜಾಂತರಂಗದಲ್ಲಿ ಧರ್ಮಮೂಲವು ನಿದ್ರಿಸಿರುತ್ತದೆ. ಶಾಸನ ಸಭೆಯಲ್ಲಿ ಅದು ಎಚ್ಚೆತ್ತು ಮಾತನಾಡುತ್ತದೆ. ಹೀಗೆ ನ್ಯಾಯ ವೆಂಬುದು ಲೋಕದ ಅಂತಃಕರಣದಲ್ಲಿ ಸ್ಸೈಜವಾಗಿ ಇರುವ ಒಂದು ತತ್ತ್ವದ ಬಹಿರವತಾರ. ಆದದ್ದರಿಂದಲೇ ಅದಕ್ಕೆ ಲೋಕಾಂಗೀಕಾರ.

ಈ ಜಿಜ್ಞಾಸೆಯಿಂದ ಸಿದ್ಧವಾಗುವುದಿಷ್ಟು—(೧) ನ್ಯಾಯ ವೆಂದರೆ ಸತ್ಯಕ್ಕನುಗುಣವಾದ ನಡವಳಿಕೆ, (೨) ಸತ್ಯಕ್ಕೆ ಮೂಲ ವಾದದ್ದು ಋತ; ಅದು ಮನುಷ್ಯನಲ್ಲಿ ಸ್ವೈಜವಾಗಿರುವ ಸತ್ತ್ವ ಗುಣದ ಪ್ರೇರಣೆ. (೩) ಆದರೆ ಸಾಮಾನ್ಯ ಜನದಲ್ಲಿ ರಜೋ ಗುಣ ತಮೋಗುಣಗಳು ಹೆಚ್ಚಾಗಿ ಸತ್ತ್ವಗುಣವು ಬಲ ಹೀನವಾಗಿರುತ್ತದೆ. (೪) ರಾಜ್ಯವು ನ್ಯಾಯವನ್ನು ನಡಸು ವುದಾದರೆ, ಅದು ಮಹಾಜನರಲ್ಲಿ ಅಡಗಿಕೊಂಡಿರುವ ಸತ್ತ್ವ ಪ್ರವೃತ್ತಿಯನ್ನು ಪ್ರೋತ್ಸಾಹಿಸಿ ಬೆಳಸಬೇಕು.

ರಾಜ್ಯದ ನ್ಯಾಯಪರಿಪಾಲನೆಯು ಪ್ರಜೆಯ ಸತ್ತ್ವ ಪ್ರವೃತ್ತಿಗೆ ತಕ್ಕಂತೆ ಇರುತ್ತದೆ.

ನ್ಯಾಯದ ಆಕಾರ ಪ್ರಕಾರಗಳು ಎಂಥೆಂಥ ಸಂದರ್ಭಗಳಲ್ಲಿ ಹೇಗೆ ಹೇಗಿರತಕ್ಕದ್ದೆಂಬುದನ್ನು ಗೊತ್ತಾಗಿ ತಿಳಿಸುವ ವಾಕ್ಯವೇ ರಾಜ್ಯಶಾಸನ (ಕಾನೂನು, "ಲಾ").

ಶಾಸನವು ಅನೇಕ ರೂಪಗಳಲ್ಲಿರುತ್ತದೆ. ಅವುಗಳಲ್ಲಿ ಮುಖ್ಯ ವಾದವು ಇವು:—

(೧) ಬಹುಕಾಲದಿಂದ ಸಮಾಜವು ಅನುಸರಿಸಿಕೊಂಡು ಬಂದಿರುವ ಧರ್ಮಶಾಸ್ತ್ರ ನಿಬಂಧನೆಗಳು, ಅಥವಾ ಸ್ಮೃತಿಗಳು; ("ಸ್ಮೃತಿ" ಎಂದರೆ ಹಳೆಯದರ ನೆನಪು; ಹಿಂದೆ ಇದ್ದದ್ದರ ಜ್ಞಾಪಕ).

(೨) ಗ್ರಂಥದಲ್ಲಿಲ್ಲದಿದ್ದರೂ ಜನದ ರೂಢಿಯಲ್ಲಿರುವ ಆಚಾರ ಸಂಕೇತಗಳು—"ಮಾಮೂಲು";

(೩) ವೃದ್ಧರು, ವಿದ್ವಾಂಸರು, ಕುಲಮುಖ್ಯರು ಮೊದಲಾದ ಗಣ್ಯಜನರು ಕೊಟ್ಟ ಉಪದೇಶಗಳು ;

(೪) ವಿವಾದ ಸಂದರ್ಭದಲ್ಲಿ ನ್ಯಾಯಾಧಿಕಾರಿಗಳು (ಜಡ್ಜಿ) ಕೊಟ್ಟ ತೀರ್ಮಾನಗಳು ;

(೫) ಆಗಿಂದಾಗ್ಗೆ ಸಮಾಜದಲ್ಲಿ ಉಂಟಾಗುವ ಹೊಸ ಹೊಸ ಸಂದರ್ಭಗಳಿಗೆ ತಕ್ಕಂತೆ ರಾಜ್ಯದ ಶಾಸನಾಂಗವು ರಚಿಸುವ ನೂತನ ಶಾಸನವಿಧಿಗಳು.

ಇದರಲ್ಲಿ ಎಲ್ಲಕ್ಕೂ ಆಧಾರವಾದದ್ದು ಪೂರ್ವದಿಂದ ಬಂದಿರುವ ಧರ್ಮಶಾಸ್ತ್ರ. ಆದರಿಂದೀಚೆಗೆ ವೃದ್ಧರೂ ಜಡ್ಜಿಗಳೂ ನೂತನ ಶಾಸನಕರ್ತರೂ ಕೊಡುವ ಸಂದೇಶಗಳೂ ನಿರ್ಣಯಗಳೂ ಬಹುಮಟ್ಟಿಗೆ ಹಳೆಯ ಶಾಸ್ತ್ರದ ವಿಸ್ತರಣೆಗಳೂ ಪುರೋವೃದ್ಧಿಗಳೂ ಆಗಿರುತ್ತವೆ; ಏಕೆಂದರೆ ಈ ಹೊಸಬರ ಒದುಕೂ ಬೆಳವಣಿಗೆಯೂ ಬಹುಮಟ್ಟಿಗೆ ಆ ಹಳೆಯ ಶಾಸ್ತ್ರ ಸಂಪ್ರದಾಯಗಳ ಪ್ರಭಾವದಲ್ಲಿ ನಡೆದಿರುತ್ತವೆ. ಹೊಸ ಏರ್ಪಾಟೊಂದನ್ನು ಮಾಡಿಕೊಳ್ಳಬೇಕೆಂಬ ಬುದ್ಧಿ ಹೊಸಬರಿಗೆ ಹಳೆಯದರ ಅನುಭವದಿಂದಲೇ ಒಂದಿರುತ್ತದೆ. ಹೀಗೆ ಹಳೆಯದು ಹೊಸದರ ಒಡಲಿನ ಒಳಗಡೆ ಯಾವಾಗಲೂ ಬೀಜರೂಪದಲ್ಲಿ ಗುಪ್ತವಾಗಿ ಅಡಗಿಕೊಂಡೇ ಇರುತ್ತದೆ. ಹಳೆಯ ಗಣೇಶನ ಮಣ್ಣನ್ನು ತಿದ್ದಿಟ್ಟರೆ ಹೊಸ ಆಂಜನೇಯನಾಗುತ್ತದೆ.

## ಶಾಸನದಲ್ಲಿ ಪ್ರಜಾ ಪಾರಮ್ಯ

ಹೊಸದಾಗಿ ಆಗುವ ರಾಜ್ಯಶಾಸನದ ವಿಷಯದಲ್ಲಿ ನಾವು ಈಗ ಗಮನಿಸಬೇಕಾದ ಸಂಗತಿಯೇನೆಂದರೆ—ಪೂರ್ವಕಾಲದಲ್ಲಿ ಹೊಸದಾಗಿ ಶಾಸನರಚನೆ ಮಾಡುತ್ತಿದ್ದವರು ರಾಜರೊಬ್ಬರು, ಅಥವಾ ರಾಜನು ನಿಯಮಿಸಿದ ಕೆಲಮಂದಿ ಮಂತ್ರಿಗಳು, ಅಥವಾ ಒಂದು ಸಣ್ಣ ಮಂತ್ರಾಲೋಚನ ಸಭೆ. ಈಗ ಅದು

ಪೂರ್ತಿ ಬದಲಾಯಿಸಿದೆ. ಈಗ ಶಾಸನರಚನೆ ಮಾಡುವವರು ಒಬ್ಬರೋ ನಾಲ್ವರೈವರೋ ಅಲ್ಲ; ಈಗ ದೇಶದ ಮಹಾಜನ ಸಮಸ್ತರ ಕೈವಾಡವೂ ಶಾಸನ ರಚನೆಯಲ್ಲಿ ಸೇರಿರುತ್ತದೆ. ಅವರು, ಅಥವಾ ಅವರಲ್ಲಿ ಬಹುಮಂದಿ, ತಾವು ಆರಿಸಿದ ಪ್ರತಿನಿಧಿಗಳ ಮುಖಾಂತರ ಶಾಸನರಚನೆಯಲ್ಲಿ ಭಾಗವಹಿಸುತ್ತಾರೆ. ಹೀಗೆ ನ್ಯಾಯವಿಧಾನವನ್ನು ಗೊತ್ತುಮಾಡುವ ಅಧಿಕಾರ ಈಗ ಸಾಮಾನ್ಯ ಜನತೆಯದಾಗಿ, ಅವರು ಸ್ವಯಂ ಆಗಿ ವರಣಮಾಡಿದ ಪ್ರತಿನಿಧಿಗಳ ಮೂಲಕ ರೂಪಗೊಳ್ಳುತ್ತದೆ.

ಶಾಸನರಚನೆ, ಅದರ ಜೊತೆಗೆ ಮಂತ್ರಿ ಸಂಪುಟದ ರಚನೆ, ಅನಂತರ ಮಂತ್ರಿಕಾರ್ಯದ ವಿಮರ್ಶನ ಪರಿಷ್ಕಾರಗಳು—ಇವೆಲ್ಲ ಇಂದಿನ ರಾಜ್ಯದಲ್ಲಿ ಪ್ರಜಾಪ್ರತಿನಿಧಿ ಘಟಿತವಾದ ಶಾಸನ ಸಭೆಯ ಅಧಿಕಾರಗಳು.

ಶಾಸನವೆಂಬುದರಲ್ಲಿ ರಾಜ್ಯದ ಆದಾಯ ವ್ಯಯಗಳ ವಿಚಾರ, ತೆರಿಗೆ ಕಂದಾಯಗಳ ವಿಚಾರ, ಜನದ ಆಸ್ತಿ ಸ್ವತ್ತುಗಳ ವಿಚಾರ, ಸಾಮಾಜಿಕ ಜೀವನದ ಮತ್ತು ವ್ಯಕ್ತಿ ಜೀವನದ ಸ್ವಾತಂತ್ರ್ಯದ ವಿಚಾರ—ಇವೆಲ್ಲ ಸೇರಿಕೊಂಡಿರುತ್ತವೆ. ಆದಕಾರಣ ಇಂದಿನ ಶಾಸನಸಂಸ್ಥೆ ರಾಜ್ಯಕ್ಕೆ ಸರ್ವಾಧಿಕಾರಿಯಾಗಿರುತ್ತದೆ.

ಪೂರ್ವಕಾಲದ ರಾಜನನ್ನು ನಿರಂಕುಶನೆನ್ನುತ್ತಿದ್ದೆವು. ಇಂದಿನ ಪ್ರಜಾಪ್ರಭುತ್ವವನ್ನು ನಿರಂಕುಶವೆನ್ನುವುದು ಉತ್ಪ್ರೇಕ್ಷೆಯಾಗದು. ರಾಜ್ಯದ ಸರ್ವಸ್ವವೂ ಇಂದು ಶಾಸನಸಂಸ್ಥೆಗೆ ವಶವಾಗಿರುತ್ತದೆ. ಆ ಸಂಸ್ಥೆ ಪ್ರಜಾತ್ಮಕವಾದದ್ದು—ಪ್ರಜೆಯಿಂದಲೇ ಜೋಡಿಸಲ್ಪಟ್ಟದ್ದು. ಪ್ರತಿನಿಧಿಗಳ ಮೇಲೆ ವರಣ (ಚುನಾವಣೆ) ಕರ್ತರ ಪ್ರಭಾವವಿರಲೇ ಇರುತ್ತದೆ. ಮೂಲ ಕರ್ತರಾದ ಆ ಪ್ರಜೆ ರಾಜ್ಯನಿಬಂಧನೆಗೆ (ಕಾನ್ಸ್ಟಿಟ್ಯೂಷನ್ನಿಗೆ) ಒಳಪಟ್ಟಿಲ್ಲವೆ?—ಎಂದರೆ, ವಾಸ್ತವವಾಗಿ ಅದು ಹಾಗಿಲ್ಲ. ರಾಜ್ಯನಿಬಂಧನೆಯನ್ನು ಮಾಡಿಸಿದವರೂ ಅಂಗೀಕರಿಸಿದವರೂ ಪ್ರಜೆ. ಅದು ತನ್ನ ಕೈಕೆಲಸವನ್ನು ತಾನು ಮೂಲೆಗೆ ತಳ್ಳುವು

ದಾದರೆ ತಡೆ ಹೇಳುವವರಾರು? ಹೀಗೆ ರಾಜಸ್ವೇಚ್ಛೆಯ ಜಾಗ ದಲ್ಲಿ ಈಗ ಪ್ರಜಾಸ್ವೇಚ್ಛೆ ಮೆರೆಯುತ್ತಿದೆ.

ಪೂರ್ವಕಾಲದ ರಾಜ್ಯವ್ಯವಸ್ಥೆಯಲ್ಲಿ ರಾಜನಾದವನು ಎಂಥ ಆತ್ಮಸಂಯಮವನ್ನೂ ಧರ್ಮನಿಷ್ಠೆಯನ್ನೂ ಕರ್ತವ್ಯ ಜಾಗೃತಿ ಯನ್ನೂ ಇರಿಸಿಕೊಳ್ಳಬೇಕೆಂದು ಶಾಸ್ತ್ರವಿಧಿಯಿತ್ತೋ (ಪುಟ ೮೯-೯೨) ಅಂಥ ಗುಣಗಳನ್ನು ಇಂದು ಪ್ರಜೆ ಅಭ್ಯಾಸಮಾಡಿ ಕೊಳ್ಳಬೇಕಾಗಿದೆ. ಪ್ರಜಾಮಂಡಲದಲ್ಲಿ ಸತ್ತ್ವಗುಣಾಧಿಕ್ಯವೂ ನ್ಯಾಯಶ್ರದ್ಧೆಯೂ ಕರ್ತವ್ಯ ವಿವೇಕವೂ ಎಷ್ಟೆಷ್ಟು ಮಾತ್ರವಿರು ತ್ತದೆಯೋ ರಾಜ್ಯದ ವಿಚಕ್ಷಣೆ ಅಷ್ಟಷ್ಟು ಮಾತ್ರವಿರುತ್ತದೆ.

ನೀತಿದೃಷ್ಟಿಯಲ್ಲಿ ಅಧಿಕಾರವೆಂದರೆ ಜವಾಬ್ದಾರಿ. ಉತ್ತರೋ ಕ್ತಿಯ ಕರ್ತವ್ಯವಿಲ್ಲದೆ ಅಧಿಕಾರಪದವಿಗೆ ನೀತಿಬಲವಿಲ್ಲ. ದೇವರ ಪ್ರಸಾದ ಬೇಕಾದರೆ ಗುಡಿಗೆ ಹರಕೆ ತೂರಬೇಕು. ಈ ನೀತಿ ನಿಯಮ ಪ್ರಜೆಗೂ ತಪ್ಪಿದ್ದಲ್ಲ. ಪ್ರಜೆ ತನ್ನ ಮಹಾ ಸಾಮ ರ್ಥ್ಯಕ್ಕೂ ಇರುವ ಪರಿಮಿತಿಯನ್ನು ಕಂಡುಕೊಂಡು ಆ ಸರಹದ್ದಿ ನೊಳಗಡೆ ರಾಷ್ಟ್ರಕ ಕರ್ತವ್ಯಗಳನ್ನು ಜಾಗರೂಕತೆಯಿಂದ ನೆರವೇರಿಸಿದರೆ ಆಗ ಪ್ರಜಾ ರಾಜ್ಯವು ನೀತಿಸಮ್ಮತವೆನಿಸಿ ಯಶಸ್ವಿಯಾದೀತು.

## ರಾಷ್ಟ್ರಕ ಧರ್ಮ

ಪ್ರಜೆಯೆಂದರೆ ಇಲ್ಲಿ ರಾಜ್ಯಕಾರ್ಯ ಸಮರ್ಥನಾದ ಪ್ರಜೆಯೆಂದು ಭಾವ. ಅಂಥ ಪ್ರಜಾವ್ಯಕ್ತಿಯೇ ರಾಷ್ಟ್ರಕ (ಸಿಟಿಜ಼ೆನ್). ಅವನೇ ಪ್ರಜಾರಾಜ್ಯದ ಭಾರವನ್ನು ತಳಗಡೆ ಯಲ್ಲಿ ಹೊತ್ತಿರುವವನು. ರಾಷ್ಟ್ರಕನ ಕರ್ತವ್ಯಗಳಲ್ಲಿ ಮುಖ್ಯ ವಾದವು :—

(೧) ರಾಜ್ಯಶಾಸನಕ್ಕೆ ವಿಧೇಯನಾಗಿ ನಡೆದುಕೊಳ್ಳುವುದು, ಅಧಿಕಾರಸ್ಥಾನಗಳಿಗೆ ಆದರಸನ್ಮಾನ ತೋರಿಸುವುದು, ನ್ಯಾಯವಿಚಾ ರಣೆಯಲ್ಲಿ ಸಾಕ್ಷ್ಯ ಸಹಾಯಕೊಡುವುದು, ಸರಕಾರಕ್ಕೆ ಸಲ್ಲ

ಬೇಕಾದದ್ದನ್ನು ಸಲ್ಲಿಸುವುದು—ಇವೆಲ್ಲ ಶಾಸನ ವಿಧೇಯತೆಯ ರೂಪಗಳು.

(೨) ಶಾಸನದಲ್ಲಿ ಬದಲಾವಣೆಯಾಗಬೇಕೆಂದು ತೋರಿ ಬಂದಾಗ ಅದರ ಪರಿಷ್ಕರಣೆಗಾಗಿ ತನ್ನಿಂದಾಗುವ ಪ್ರಯತ್ನಗಳನ್ನು ನಡಸುವುದು,—ಅದನ್ನು ಕುರಿತು ಪತ್ರಿಕೆಗಳಲ್ಲಿ ಬರೆಯುವುದು, ಸಭೆಗಳಲ್ಲಿ ಟೀಕಿಸುವುದು, ತನ್ನ ಪ್ರತಿನಿಧಿಗಳಿಗೆ ಅರಿಕೆ ಮಾಡುವುದು,—ಅವಶ್ಯವಾದರೆ ಪ್ರತಿಭಟಿಸಿ ಕಷ್ಟಾನುಭವಕ್ಕೆ ಸಿದ್ಧನಾಗಿರುವುದು—ಇತ್ಯಾದಿ.

(೩) ಪ್ರತಿನಿಧಿಗಳನ್ನಾರಿಸುವಲ್ಲಿ ಜಾತಿಮತ ಕೋಮುಗಳ ಪಕ್ಷಪಾತಕ್ಕೆ ವಶನಾಗದೆ ಪ್ರಮಾಣಪೂರ್ವಕವಾದ ಯೋಗ್ಯತಾ ಪರೀಕ್ಷೆಯಿಂದ ತನ್ನ ಮತದಾನವನ್ನು (ವೋಟ್) ಕೊಡುವುದು.

(೪) ಚುನಾವಣೆಯಾದ ಬಳಿಕ ತನ್ನ ಪ್ರತಿನಿಧಿಯು ಶಾಸನ ಸಂಸ್ಥೆಯಲ್ಲಿ ಹೇಗೆ ಕೆಲಸಮಾಡುತ್ತಿದ್ದಾನೆಂಬುದನ್ನು ಪದೇ ಪದೇ ಪರಿಶೀಲಿಸಿ ಆತನಿಗೆ ಎಚ್ಚರಿಕೆಯನ್ನೂ ಸಲಹೆಯನ್ನೂ ಕೊಡುವುದು.

(೫) ಸರಕಾರದ ನಡವಳಿಕೆ ಕಾರಕರ್ತುಗಳನ್ನು ನಿಷ್ಪಾಕ್ಷಿಕ ದೃಷ್ಟಿಯಿಂದ ಪರೀಕ್ಷಿಸಿ ನೋಡಿ, ಜನದ ಕೊರತೆ ಕೋರಿಕೆಗಳನ್ನು ಗಮನಕ್ಕೆ ತರುವುದು.

(೬) ಸರಕಾರವಾಗಲಿ ಜನಮುಖ್ಯರಾಗಲಿ ಆಲೋಚಿಸುತ್ತಿರುವ ಕಾನೂನುಗಳ ವಿಷಯದಲ್ಲಿಯೂ ಏರ್ಪಾಟುಗಳ ವಿಷಯದಲ್ಲಿಯೂ ತನ್ನ ಸ್ವತಂತ್ರಾಭಿಪ್ರಾಯವನ್ನು ಪ್ರಕಟಿಸುವುದು.

(೭) ದೇಶ ವಿಚಾರಗಳನ್ನು ಕುರಿತು ಗ್ರಂಥಗಳಿಂದಲೂ ಪತ್ರಿಕೆಗಳಿಂದಲೂ ತಿಳಿವಳಿಕೆ ಸಂಪಾದಿಸಿಕೊಳ್ಳುವುದು ಮತ್ತು ಆಲೋಚಿಸುವುದು.

(೮) ಮನಸ್ಸಮುನ್ನತಿಗೂ ನೀತಿ ಸಂಸ್ಕೃತಿಗೂ ಭಾವ ವಿಶಾಲತೆಗೂ ಸಾಧಕಗಳಾದ ಕಾವ್ಯ, ಸಂಗೀತ, ಶಿಲ್ಪಾದಿ ಕಲೆಗಳಲ್ಲಿ ಅಭಿರುಚಿ ಬೆಳೆಸಿಕೊಳ್ಳುವುದು.

(೯) ವಿದ್ಯಾಶಾಲೆ, ವೈದ್ಯಶಾಲೆ, ಸಹಕಾರಸಂಘ, ಪುಸ್ತಕಾಲಯ, ಪೌರಸಂಘ—ಇಂಥ ಸಾರ್ವಜನಿಕ ಸಂಸ್ಥೆಗಳ ಸದಸ್ಯನಾಗಿದ್ದುಕೊಂಡು ತನಗನುಕೂಲವಾದಷ್ಟು ಹೆಚ್ಚು ಹೆಚ್ಚಾಗಿ ಅವುಗಳ ಕಾರ್ಯದಲ್ಲಿ ಭಾಗವಹಿಸುವದು.

(೧೦) ತನ್ನ ನೆರೆಹೊರೆಯಲ್ಲಿ ಸಾರ್ವಜನಿಕ ಮನೋಭಾವವನ್ನೂ ಸ್ವತಂತ್ರ ವಿಚಾರಾಭ್ಯಾಸವನ್ನೂ ಅಭಿವೃದ್ಧಿಪಡಿಸುವುದು.

ರಾಷ್ಟ್ರಿಕನಲ್ಲಿ ಈ ಲಕ್ಷಣಗಳಿಲ್ಲದಾಗ ಪ್ರಜಾರಾಜ್ಯವು ಡೊಂಬಿಯ ದೌಲತ್ತಾಗುವುದು ತಪ್ಪದು. ಪ್ರಜಾ ರಾಜ್ಯಕ್ಕಿರುವ ಮೊದಲನೆಯ ಶತ್ರುವು ಪ್ರಜೆಯ ಅಶಿಕ್ಷೆ.

# ೧೫. ಸಾರ್ವಜನಿಕ ಪುರುಷರು

ಸಮಾಜದ ಹಿತಸಂಪಾದನೆಯ ದೃಷ್ಟಿಯಿಂದ,—ಅಥವಾ ರಾಷ್ಟ್ರಕ ಕರ್ತವ್ಯದ ದೃಷ್ಟಿಯಿಂದ,—ದೇಶದ ಜನವನ್ನು ಆರು ವರ್ಗಗಳಾಗಿ ವಿಂಗಡಿಸಬಹುದು—

(೧) ಉದಾಸೀನರು,
(೨) ಶಾಸ್ತ್ರನಿಮಿತ್ತರು,
(೩) ಶ್ರದ್ಧಾವಂತರು—ದೇಶಧ್ವಜಿಗಳು,
(೪) ,, ಸಂಕ್ಷೋಭಪ್ರಿಯರು,
(೫) ,, ಆದರ್ಶಪೂರ್ಣರು,
(೬) ,, ಸಾಧ್ಯಚಿಂತಕರು.

(೧) ಜನತೆಯಲ್ಲಿ ಬಹುಮಂದಿ ಎಲ್ಲ ದೇಶಗಳಲ್ಲಿಯೂ ಉದಾಸೀನರೇ. ಇಂಡಿಯದಲ್ಲಿ ಅಂಥವರ ಶೇಕಡಾ ಸಂಖ್ಯೆ ಯೂರೋಪಿನಲ್ಲಿರುವುದಕ್ಕಿಂತ ಬಹಳ ಹೆಚ್ಚೆಂದು ತೋರುತ್ತದೆ. ರಾಜಕೀಯ ಚುನಾವಣೆಗಳ ಲೆಕ್ಕಗಳಿಂದಲೂ ಇತರ ಪ್ರಮಾಣಗಳಿಂದಲೂ ಇದನ್ನು ಕಂಡುಕೊಳ್ಳಬಹುದು.

(೨) ಶಾಸ್ತ್ರನಿಮಿತ್ತರು ಬರಿಯ ಮೇಲ್ನೋಟಕ್ಕಾಗಿ—ಹೆಚ್ಚು ಶ್ರದ್ಧಾಸಕ್ತಿಗಳಿಲ್ಲದೆ, ಅರೆಮನಸ್ಸಿನಿಂದ—ಶಾಸ್ತ್ರವಚನಕ್ಕೆ ಎಷ್ಟು ಬೇಕೋ ಅಷ್ಟು ಮಾತ್ರ—ಆಚರಣೆ ಮಾಡುವವರು. ಉದಾಸೀನರನ್ನು ಬಿಟ್ಟರೆ ಇವರ ಸಂಖ್ಯೆಯೇ ದೊಡ್ಡದು.

(೩) ಇನ್ನುಳಿದ ನಾಲ್ಕು ಜಾತಿಯವರೇ ಸಾರ್ವಜನಿಕ ಜೀವನದಲ್ಲಿ ಮುಂದೆ ಬರುವವರು. ಅವರೆಲ್ಲರೂ ಪರಿಷ್ಕಾರವಾದಿಗಳೇ,—ಎಲ್ಲರೂ ಪ್ರಕೃತ ಪರಿಸ್ಥಿತಿ ಚೆನ್ನಾಗಿಲ್ಲವೆಂದೂ, ಅದನ್ನು

ತಿದ್ದಿ ಸರಿಪಡಿಸುವುದೇ ತಮ್ಮ ಉದ್ದೇಶವೆಂದೂ ಹೇಳಿಕೊಳ್ಳು ವವರೇ. ಮತ್ತು ಆ ಎಲ್ಲರೂ ತಮ್ಮ ತಮ್ಮ ದಾರಿಯಲ್ಲಿ ಅತ್ಯಂತ ಆಸಕ್ತಿಯಿಂದಲೂ ದೃಢನಿಷ್ಠೆಯಿಂದಲೂ ನಡೆಯು ವವರೇ. ಆದರೆ ಅವರ ಮನೋಗತಗಳೂ ಕಾರ್ಯವಿಧಾನಗಳೂ ಮಾತ್ರ ಬೇರೆ ಬೇರೆ.

ಅವರಲ್ಲಿ ದೇಶಧ್ವಜಿಗಳು "ವಂದೇ ಮಾತರಂ", "ಜನಗಣ", "ಗಾಂಧೀಕಿ ಜೈ" ಇಂಥ ವಾಕ್ಯಗಳನ್ನು ಬಾವುಟಗಳ ಮೇಲೆ ಬರೆದುಕೊಂಡು, ಬಾಯಿಂದ ದೊಡ್ಡ ದೊಡ್ಡ ಮಾತುಗಳನ್ನಾ ಡುತ್ತ, ಕಣ್ಣುಗಳಿಂದ ಮಾತ್ರ ಅಷ್ಟಿಷ್ಟು ಗಿಟ್ಟಿಸಿಕೊಳ್ಳಲು ಹೊಂಚಿ ನೋಡುತ್ತಿರುವವರು. ಇವರಲ್ಲಿ ನಾನಾ ಜಾತಿಗಳು. ಕೆಲವರು ಆಷಾಢಭೂತಿಗಳು; ಕೆಲವರು ಶಕುನಿಗಳು; ಕೆಲವರು ಡೊಂಬಿಧಾಳಿಗರು; ಕೆಲವರು ಪರೇಲಾ (ಗಂಜೀಫು) ಆಟ ಗಾರರು. ಇವರಿಗೆಲ್ಲರಿಗೂ ರಾಜಕೀಯ ಒಂದು "ವ್ಯಾಪಾರ; ಅದು ಒಂದು ಪರಿಷೆಯ ಕೋಲಾಹಲ."

(೪) ಸಂಕ್ಷೋಭಪ್ರಿಯರು ಎಲ್ಲವನ್ನೂ ಬದಲಾಯಿಸುತ್ತಿರ ಬೇಕೆನ್ನುವವರು. ಇರುವುದನ್ನು ಕಿತ್ತುಹಾಕೋಣ; ಅನಂತರ ಮೇಲೇ ನಾದರಾಗಿಕೊಳ್ಳಲಿ; ಹೇಗೋ ಒಳ್ಳೆಯದಾಗುತ್ತದೆ—ಇದು ಅವರ ನಂಬಿಕೆ. ಹೊಸ ಏರ್ಪಾಟಿನ ಯೋಜನೆ ಅವರಿಗೆ ಇಲ್ಲ ವೆಂದಲ್ಲ. ಹೊಸ ಹೊಸ ಯೋಜನೆಗಳು ಅವರಿಗೆ ಬರುತ್ತಲೇ ಇರುತ್ತವೆ; ಅದೇ ಅವರಲ್ಲಿಯ ಕಷ್ಟ. ಯಾವ ಒಂದು ಯೋಜ ನೆಗೂ ಅವರು ತಕ್ಕಷ್ಟು ಕಾಲ ಕೊಡರು. ಈ ಹೊತ್ತು ನೆಟ್ಟ ಸಸಿಯನ್ನು ನಾಳೆ ಕಿತ್ತುಹಾಕಿ ಬೇರೊಂದನ್ನು ನಡಬೇಕೆನ್ನು ತ್ತಾರೆ. ಸಮಾಜಕ್ಕೊಂದು ಒಡಲಿದೆ; ಅದಕ್ಕೊಂದು ಬೇರಿದೆ; ಬೇರನ್ನು ಕಿತ್ತರೆ ಮರ ಒಣಗೀತೆಂಬುದನ್ನು ಅವರು ಮರೆಯು ತ್ತಾರೆ.

(೫) ಆದರ್ಶಪೂರ್ಣರು ತತ್ತ್ವಗಳ ಮೂಟೆ. ಅವರ ಮನಸ್ಸು ತರ್ಕಶಾಸ್ತ್ರದ ಭಂಡಾರ. ಮನುಷ್ಯಲೋಕ ಅವರ ಪಾಲಿಗೆ ಶುದ್ಧ ಗಣಿತಯಂತ್ರ,—ಎಣಿಸಿದಂತೆ ನಡೆಯಬೇಕಾದದ್ದು. ಅವರು ಉದ್ದೇಶಪಟ್ಟಂತೆ ಎಲ್ಲ ಆಗಬೇಕು ; ಯಾವ ಒಂದಂಶ ಕೊಂಚ ಕಡಮೆಯಾದರೂ ಅವರು ಸರ್ವನಾಶವಾಯಿತೆಂದು ಕಾಡಿಗೆ ಹೊರಡುತ್ತಾರೆ. ಲೋಕಸ್ವಭಾವದ ನ್ಯೂನತೆಗಳನ್ನು ಅವರು ಮರೆತಿರುವುದರಿಂದ ಅವರ ಸರ್ವಸಂಪೂರ್ಣತೋತ್ಸಾಹದಿಂದ ಲೋಕಕ್ಕೆ ಬರಿಯ ಪೇಚಾಟವೇ ಫಲ.

(೬) ಸಾಧ್ಯಚಿಂತಕರು ಆದರ್ಶವನ್ನು ಬಿಟ್ಟವರಲ್ಲ. ಅವರು ಧ್ಯೇಯಗಳನ್ನೂ ತತ್ತ್ವಗಳನ್ನೂ ವಾಸ್ತವ ಸಂದರ್ಭಗಳ ಬೆಳಕಿನಲ್ಲಿ ನೋಡಿ ಪುನಶ್ಶೋಧನೆ ಮಾಡಿಕೊಳ್ಳುತ್ತಾರೆ. ಅವರ ಉತ್ಸಾಹವು ಎಂದೂ ವಿವೇಕವನ್ನು ಬಿಟ್ಟಿರುವುದಿಲ್ಲ. ಆದರ್ಶದ ಚಿತ್ರಪಟವನ್ನು ಅವರು ಸಾಧ್ಯಾಸಾಧ್ಯಗಳ ಚೌಕಟ್ಟಿನ ಮಿತಿಯೊಳಗೆ ತೋರಿಸುತ್ತಾರೆ. ಗಮ್ಯಸ್ಥಾನಕ್ಕೆ ಅವರು ಹಾರುವವರಲ್ಲ ; ಹೆಜ್ಜೆಹೆಜ್ಜೆಯನ್ನೂ ಊರಿ, ಅದು ಗಟ್ಟಿ ನೆಲವೆಂದು ಭರವಸೆ ಬಂದ ಮೇಲೆ ಮುಂದಕ್ಕಡಿ ಇಡುವವರು ಅವರು. ಅವರದು ಮಿತವೇಗ. ಅವರು ಒಂದು ಕಡೆ ಲೋಕವನ್ನು ವೇಗಕ್ಕೆ ಹುರಿದುಂಬಿಸುತ್ತಾರೆ; ಇನ್ನೊಂದು ಕಡೆ ಲೋಕದ ಹೆಜ್ಜೆಗಾಗಿ ಕಾದುಕೊಂಡಿದ್ದು ಅದಕ್ಕೆ ಬಹುದೂರವಾಗದಂತೆ ತಾವು ಮುನ್ನಡಿಯಿಡುತ್ತಾರೆ. ಹಾಗೆಯೇ ಒಂದೊಂದು ಸಂದರ್ಭವನ್ನೂ ನಾನಾ ಮುಖಗಳಿಂದ ಪರಿಶೀಲಿಸಿ, ಪರಸ್ಪರ ವಿರೋಧವೆಂದು ತೋರುವ ಅಂಶಗಳನ್ನು ಸಮನ್ವಯಗೊಳಿಸಲು ಪ್ರಯತ್ನಿಸುತ್ತಿರುತ್ತಾರೆ. ಇಂಥವರೇ ಪ್ರಗತಿಸಾಧಕರು. ಆದರೆ ಅವರಲ್ಲಿ ವೀರಾವೇಶ ತೋರದು. ಬಹು ಜನರಲ್ಲಿ ಸ್ವಾಭಾವಿಕವಾಗಿರುವ ನಾಟಕಾಭಿರುಚಿಗೆ ಇಂಥವರಿಂದ ನಿರಾಶೆ. ಆಲೋಚನೆಗೆಂದು ಕೂಡುವವನನ್ನು ಜನರು ಮಂಕನೆಂದೆನ್ನುತ್ತಾರೆ ; ಅಥವಾ

ಏಕಧ್ಯಾನಿಯೆಂದೆನ್ನುತ್ತಾರೆ. ತೂಕವಾಡಿ ಆಡಿದ ಮಾತು ಅವರ ಕಿವಿಗೆ ಸಪ್ಪೆ. ಅವರ ವೀರನು ಧರ್ಮರಾಯನಲ್ಲ, ಭೀಮಸೇನ. ಆದರೂ ಲೋಕವನ್ನು ಎಚ್ಚರಿಸಿ ಕ್ಷೇಮದಲ್ಲಿ ಕಾಪಾಡುವವರು ಈ ಅನುದ್ವೇಗ ಪ್ರಗತಿ ಕುಶಲರು.

ರಾಷ್ಟ್ರಕನು ಜಾಗರೂಕನಾಗಿರಬೇಕಾದದ್ದು ಈ ಶ್ರದ್ಧಾವಂತರಾದ ಜನನಾಯಕರ ವಿಷಯದಲ್ಲಿ. ಮೇಲಣ ೩, ೪, ೫, ೬ ನೆಯ ವರ್ಗಗಳ ತಾರತಮ್ಯಗಳನ್ನು ಅವನು ಮರೆಯಬಾರದು. ಅಂಗೈಯ ವೈಕುಂಠಕ್ಕೆ ಮರುಳಾಗಬಾರದು. ಆದರ್ಶಪೂರ್ಣರನ್ನು ಅವನು ಗೌರವಿಸಬೇಕು; ಸಾಧ್ಯಚಿಂತಕರನ್ನು ಅನುಸರಿಸಬೇಕು. ಆದರ್ಶಬೋಧನೆ ನಮ್ಮ ಆಹಾರದಲ್ಲಿ ಉಪ್ಪು ಮೆಣಸುಗಳಂತೆ; ಸಾಧ್ಯಸಂಪಾದನೆ ಅಕ್ಕಿ ಬೇಳೆಗಳಂತೆ. ನಮ್ಮ ಧ್ಯೇಯಗಳು ಉತ್ತಮವಾಗಿರುವುದು ಆವಶ್ಯಕ; ಆದರೆ ಅಷ್ಟೇ ಸಾಲದು; ಅದರ ಜೊತೆಗೆ ಪರಿಜ್ಞಾನ ವಿವೇಚನೆಗಳೂ ಸೇರಬೇಕು. ನಮ್ಮ ಅನುಸಂಧಾನದಲ್ಲಿ ಒಂದು ನಯ, ಒಂದು ಮಿತಗತಿ, ಒಂದು ಸಮರಸ, ಒಂದು ಸಮನ್ವಯಕ್ರಮ—ಇವು ಇಲ್ಲದಿದ್ದಲ್ಲಿ ನಮ್ಮ ಆದರ್ಶಗಳು ಬರಿಯ ಹಗಲುಗನಸುಗಳಾದಾವು.

## ಅಪಾಯ ಭಯ

ಪ್ರಜಾರಾಜ್ಯದಲ್ಲಿ ಭಯಸ್ಥಾನವೊಂದಿಲ್ಲ. ಸರಾಜಕ ರಾಜ್ಯದಲ್ಲಿ ಭಯಸ್ಥಾನವು ಒಂದಾದರೂ ಇರುತ್ತದೆ. ಅಲ್ಲಿ ಜನರು ಯಾರಿಗೆ ಹೆದರದಿದ್ದರೂ ರಾಜನಿಗೆ ಹೆದರುತ್ತಾರೆ. ಅಲ್ಲಿ "ದೊರೆಯ ತನಕ ದೂರು" ಎಂಬ ಅವಕಾಶವಿರುತ್ತದೆ. ರಾಜನಾದರೋ ಪ್ರಜೆಗೆ ಹೆದರುತ್ತಾನೆ. ಎಂಥ ನಿರಂಕುಶ ರಾಜನಿಗೂ ಪ್ರಜೆ ಎಲ್ಲಿ ತಿರುಗಿಬಿದ್ದಾರೋ, ಎಲ್ಲಿ ದಂಗೆಯಾದೀತೋ, ಎಂಬ ಭಯ ಮನಸ್ಸಿನಲ್ಲಿದ್ದೇ ಇರುತ್ತದೆ. ರಾಜನಿಲ್ಲದ ಪ್ರಜಾರಾಜ್ಯದಲ್ಲಿ ಪ್ರಜೆಗೆ ಯಾವ ಭಯವೂ ಇರದು. ರಾಜ್ಯದ ಮೂಲ ನಿಬಂಧನೆಯೇ ಪ್ರಜೆಯ ಕೈಕೆಲಸ. ಯಾರ ಪ್ರೇರಣೆ

ಯಿಂದಲೋ ಯಾವ ಪ್ರಭಾವದಿಂದಲೋ ಪ್ರಜೆ ಹದ್ದು ಮೀರಿದರೆ, ಆ ನಿಬಂಧನೆ ನಿರರ್ಥಕವಾಗುವುದು, ರಾಜ್ಯವು ತಲೆಕೆಳಗಾದೀತು. ಇದು ನಿರ್ಭಯ ಸ್ಥಿತಿಯ ಅಪಾಯ. ದೇವತೆಗಳು ಸಹ ಭೀತಿಯಿಲ್ಲದೆ ಹೋದರೆ ಕರ್ತವ್ಯದಲ್ಲಿ ತಪ್ಪುಯಾರೆಂದು ವೇದ ಸೂಚಿಸುತ್ತದೆ:—

ಭೀಷಾಸ್ಮಾದ್ವಾತಃ ಪವತೇ
ಭೀಷೋದೇತಿ ಸೂರ್ಯಃ

(ವಾಯುವು ಚಲಿಸುವುದೂ ಸೂರ್ಯನುದಿಸುವುದೂ ಈಶ್ವರ ಭೀತಿಯಿಂದಲೇ.)

ರಾಜ್ಯವು ಕ್ಷೇಮದಲ್ಲಿರಬೇಕಾದರೆ ಪ್ರಜೆ ತನಗೆ ತಾನೇ ಹೆದರಿಕೊಳ್ಳಬೇಕು. ತನ್ನ ಯೋಗ್ಯತೆಯಲ್ಲಿರುವ ನ್ಯೂನತೆಗಳನ್ನೂ ತನ್ನ ಸಾಮರ್ಥ್ಯಕ್ಕಿರುವ ಪರಿಮಿತಿಗಳನ್ನೂ ಪ್ರಜೆ ಸರ್ವದಾ ನೆನಪಿನಲ್ಲಿರಿಸಿಕೊಂಡು ನಡೆಯಬೇಕು. ದೇವರ ಭಯವೇ ಮನುಷ್ಯನು ಜ್ಞಾನವಂತನಾಗಲು ಪ್ರಾರಂಭವೆಂದು ಕ್ರಿಸ್ತರ ಧರ್ಮಗ್ರಂಥದಲ್ಲಿ ಹೇಳಿದೆ (O. T. Pro. 9, 10.). ಇದು ಎಲ್ಲರಿಗೂ ರಾಜಕೀಯದಲ್ಲಿಯೂ ಗ್ರಾಹ್ಯವಾದ ಉಪದೇಶ.

ಪ್ರಜಾರಾಜ್ಯಕ್ಕಿರುವ ಇತರ ಅಪಾಯಗಳು—(೧) ಕಕ್ಷಿಪಕ್ಷಗಳ ಅತಿ ಪ್ರಾಬಲ್ಯ, (೨) ಸರಕಾರವು ತನ್ನ ಶಕ್ತಿಸಂಪತ್ತುಗಳಿಗೆ ಮೀರಿದ ಕಾರ್ಯಗಳಿಗೆ ಕೈಹಾಕುವುದು, (೩) ಸಮಾಜವು ವ್ಯಕ್ತಿಯನ್ನು ತುಳಿಯುವುದು, (೪) ರಾಷ್ಟ್ರಕರು ಉದಾಸೀನರಾಗಿರುವುದು.

ದೇಶವನ್ನು ಪ್ರಜೆ ಆಳುತ್ತದಂತೆ; ಪ್ರಜೆಯನ್ನು ಪ್ರಜಾಪ್ರತಿನಿಧಿಗಳು ಆಳುತ್ತಾರೆ; ಪ್ರತಿನಿಧಿಗಳನ್ನು ಅವರವರ ರಾಜಕೀಯ ಪಕ್ಷವು ಆಳುತ್ತದೆ; ಪಕ್ಷವನ್ನು ನಾಯಕರು ಆಳುತ್ತಾರೆ; ನಾಯಕರನ್ನು ಅವರವರ ಅಧಿಕಾರಾಕಾಂಕ್ಷೆ ಆಳುತ್ತದೆ. ಹೀಗಾಗಿ ಪ್ರಜಾರಾಜ್ಯವು ಧೂರ್ತದ್ಯೂತವಾಗುವ

ರಾಜಕೀಯದಲ್ಲಿ ಪಕ್ಷಗಳೂ ಕಕ್ಷಿಗಳೂ ಹುಟ್ಟಿಕೊಳ್ಳುವುದು ಸ್ವಾಭಾವಿಕ. ಅವು ಅವಶ್ಯವೂ ಹೌದು. ಆದರೆ ಪಕ್ಷಗಳಿಂದಾಗುವ ಉಪಕಾರಗಳ ಜೊತೆಗೆ ಕೆಲವು ಅಪಕಾರಗಳೂ ನಡೆಯುತ್ತವೆ. ಪಕ್ಷದ ಕಣ್ಣು ಯಾವಾಗಲೂ ಅಧಿಕಾರ ಪದವಿಗಳ ಮೇಲೆಯೇ ಇರುತ್ತದೆ. ಅದರಿಂದ ನಾನಾ ಅನರ್ಥಗಳಿಗೆ ದಾರಿಯಾಗುತ್ತದೆ. ಈ ವಿಪತ್ತು ತಪ್ಪಬೇಕಾದರೆ ಪಕ್ಷಾತೀತವಾದ ರಾಷ್ಟ್ರಕವರ್ಗವು ರಾಜಕೀಯದಲ್ಲಿ ಹೆಚ್ಚಾಗಿರಬೇಕು.

## ಪಕ್ಷಾತೀತ ರಾಷ್ಟ್ರಕ

ಪ್ರಜಾರಾಜ್ಯಕ್ಕೆ ಎರಡೋ ಮೂರೋ ನಾಲ್ಕೋ ರಾಜಕೀಯ ಪಕ್ಷಗಳಿರುವುದು ಹೇಗೆ ಆವಶ್ಯಕವೋ, ಯಾವ ಪಕ್ಷಕ್ಕೂ ಒಳಪಡದ ವಿಸ್ತಾರವಾದ ಸ್ವತಂತ್ರ ರಾಷ್ಟ್ರಕ ಸಮೂಹವಿರುವುದೂ ಹಾಗೆ ಆವಶ್ಯಕ. ಅಧಿಕಾರಾಕಾಂಕ್ಷೆಯಿಲ್ಲದ ರಾಷ್ಟ್ರಕನು ರಾಜಕೀಯದಲ್ಲಿ ಜಡ್ಜಿಯಂತೆ ನಿಷ್ಪಕ್ಷಪಾತವಾಗಿ ನ್ಯಾಯ ನಿರ್ಣಯ ಮಾಡತಕ್ಕವನು. ಪಕ್ಷಕಕ್ಷಿಗಳು ಅವನ ಮುಂದೆ,—ವಾದ ಪ್ರತಿವಾದ ಮಾಡುವ ವಕೀಲರಂತೆ,—ಒಂದೊಂದು ಪಕ್ಷವನ್ನು ಹಿಡಿದು ಹೋರಾಡುತ್ತವೆ. ಅವನು ಎಲ್ಲ ಪಕ್ಷಗಳನ್ನೂ ಚೆನ್ನಾಗಿ ನೋಡಿ, ವಿಮರ್ಶಿಸಿ, ಸ್ವತಂತ್ರ ವಿಚಾರದಿಂದ ನ್ಯಾಯವನ್ನು ತೀರ್ಮಾನಿಸುತಾನೆ. ಇಂಥಾ ಸ್ವತಂತ್ರನಾದ ನಿಷ್ಪಾಕ್ಷಿಕ ರಾಷ್ಟ್ರಕನೇ ರಾಜ್ಯಕ್ಕೆ ರಕ್ಷಾಮಣಿ.

ಪ್ರಜಾರಾಜ್ಯದ ಸರಕಾರ ಎಲ್ಲರಲ್ಲೂ ಒಳ್ಳೆಯದನ್ನು ಸಿಕೊಳ್ಳಬೇಕು. ಅದಕ್ಕಾಗಿ ಅದು ಯಾರ್ಯಾರು ಏನೇನು ಬೇಕೆಂದರೂ ಅದನ್ನೆಲ್ಲ ನಡಸಿಕೊಡುವಂತೆ ನಟಿಸಬೇಕು. ಸಂಗೀತವನ್ನು ಪ್ರೋತ್ಸಾಹಿಸಬೇಕು, ನಾಟಕವಾಡಿಸಬೇಕು, ಅಂಗಡಿ ಇಡಿಸಬೇಕು, ಕಾರ್ಖಾನೆ ನಡಸಬೇಕು :—ಹೀಗೆ ಇತರರು ಮಾಡಬಹುದಾದದ್ದನ್ನೆಲ್ಲ ಸರಕಾರ ತನ್ನ ಹೆಗಲ ಮೇಲೆ ಹೊತ್ತುಕೊಳ್ಳ

ಬೇಕಾಗುತ್ತದೆ. ಆಗ ಸಿಬ್ಬಂದಿ ಹೆಚ್ಚಿ, ಹಣ ಸಾಲದೆ ಹೋಗಿ, ಹೊಸ ತೆರಿಗೆ ಬರಬೇಕಾಗುತ್ತದೆ. ಮತ್ತು ಎಲ್ಲರ ದಾಕ್ಷಿಣ್ಯವೂ ಸರಕಾರಕ್ಕಿರುವುದರಿಂದ ಅದರ ಕಾರ್ಯಚಾಲನೆಯಲ್ಲಿ ಪರೀಕ್ಷೆ ಮೇಲ್ವಿಚಾರಣೆಗಳ ಬಿಗಿ ತಪ್ಪಿ ಅವ್ಯವಸ್ಥೆಗೆ ದಾರಿಯಾಗುತ್ತದೆ.

ಪ್ರಜಾರಾಜ್ಯದ ವಿಶೇಷ ಗುಣವೇನೆಂದರೆ,—ಅದು ದೇಶದಲ್ಲಿಯ ಪ್ರತಿಯೊಬ್ಬ ಪ್ರಜಾವ್ಯಕ್ತಿಗೂ ಒಂದು ಬೆಲೆ,—ಒಂದು ಮನ್ನಣೆ,—ಕೊಡುತ್ತದೆ ಎಂಬುದು. ಆದರೆ ಅನುಭವದಲ್ಲಿ ಪ್ರಜೆಯ ಅಧಿಕಸಂಖ್ಯೆ (ಮೆಜಾರಿಟಿ) ಅಲ್ಪಸಂಖ್ಯೆಯನ್ನು (ಮೈನಾರಿಟಿ) ತುಳಿಯುತ್ತದೆ. ಅಧಿಕಪಕ್ಷದವನಿಗೆ ತಾತ್ಕಾಲಿಕವಾಗಿ ಕ್ಷೇಮವುಂಟು, ಮನ್ನಣೆಯಿಲ್ಲ. ಏಕೆಂದರೆ ಅವನು ನೂರರಲ್ಲೊಬ್ಬ. ಅಲ್ಪಪಕ್ಷದವನಿಗೆ ಮನ್ನಣೆಯಿಲ್ಲ, ಉಳಿವೂ ಇಲ್ಲ. ಅವನ ಆಪ್ತಜೀವನಕ್ಕೆಲ್ಲ ರಾಜ್ಯ ಕಾಲುಹಾಕಿಕೊಂಡು ಬರುತ್ತದೆ. ಅವನು ಯಾವ ಗ್ರಂಥ ಓದುತ್ತಾನೆ, ಯಾವ ಹಾಡು ಕೇಳುತ್ತಾನೆ, ಯಾರನ್ನು ಮದುವೆಯಾಗುತ್ತಾನೆ, ಏನು ಊಟ ಮಾಡುತ್ತಾನೆ—ಇಂಥ ವೈಯಕ್ತಿಕ ವಿಚಾರಗಳಿಗೆ ರಾಜಕೀಯದ ಅಧಿಕಪಕ್ಷ ಕೈಹಾಕಿ, ತನ್ನ ತೀರ್ಮಾನವನ್ನು ವ್ಯಕ್ತಿಯ ಮೇಲೆ ಹೇರಿ ಅವನ ಸ್ವಾತಂತ್ರ್ಯವನ್ನು ಅದುಮಿಬಿಡುತ್ತವೆ.

ಪ್ರಜಾರಾಜ್ಯ ಎಲ್ಲರಿಗೂ ಸೇರಿದ್ದು. ಎಲ್ಲರದೂ ಆದ ಕೆಲಸ ಯಾರದೂ ಅಲ್ಲ. ಮಾಡಬೇಕಾದದ್ದನ್ನು ಇನ್ನೊಬ್ಬನು ಮಾಡಲಿ ಎಂದು ಪ್ರತಿಯೊಬ್ಬನೂ ಕೈಬಿಡುತ್ತಾನೆ. ಆಗ ಸಿಕ್ಕಿದ್ದನ್ನು ದಕ್ಕಿಸಿಕೊಳ್ಳೋಣವೆನ್ನುವ ಸಂತೆಯ ಸಾಹಸಿಗನಿಗೆ ಸಮಯ. ಅವನು ರಾಜ್ಯಸೂತ್ರಗಳನ್ನು ತನ್ನ ಕೈಗೆ ತೆಗೆದುಕೊಂಡು ಕೋಟೆ ಕಟ್ಟುತ್ತಾನೆ. ಪ್ರಜಾರಾಜ್ಯ ಜೂಜುಕಟ್ಟೆ

ಇಂಥ ಹತ್ತಾರು ಅಪಾಯಗಳಿಂದ ರಾಜ್ಯವನ್ನು ಪಾರು ಮಾಡಬೇಕಾದವನು ರಾಷ್ಟ್ರಕ. ಅವನು ರಾಜ್ಯಕಾರ್ಯವನ್ನು ತನ್ನ ಸ್ವಂತ ಮನೆಗೆಲಸವೆನ್ನುವಷ್ಟರ ಜವಾಬ್ದಾರಿ ಬುದ್ಧಿಯಿಂದಲೂ ಶ್ರದ್ಧೆಯಿಂದಲೂ ಸಿರ್ವಂಚನೆಯಿಂದಲೂ ನೋಡಬೇಕು. ಅವನ ನೀತಿ ನಿಷ್ಠೆ, ಅವನ ವಿವೇಕ ಜಾಗರೂಕತೆ, ಅವನ ಸಾರ್ವಜನಿಕದೃಷ್ಟಿ—ಇಷ್ಟನ್ನು ಯಾವ ದೈವವಾದರೂ ನಮಗೆ ಖಂಡಿತ (ಗ್ಯಾರಂಟಿ) ಮಾಡಿಕೊಡುವ ಪಕ್ಷಕ್ಕೆ ಪ್ರಜಾರಾಜ್ಯಕ್ಕೆ ಸಮಾನವಾದ ಹಿತಕರ ರಾಜ್ಯವಿನ್ಯಾವುದೂ ಅಲ್ಲವೆಂದು ನಾವು ಆ ದೈವವನ್ನು ಕೊಂಡಾಡಬಹುದು.

ಆ ಗುಣಗಳನ್ನು ಪ್ರಜೆಗೆ ಅಭ್ಯಾಸ ಮಾಡಿಸಿ ಅಭಿವೃದ್ಧಿಪಡಿಸುವುದೇ ಪ್ರಜಾರಾಜ್ಯಪದ್ಧತಿಯ ಮುಖ್ಯೋದ್ದೇಶವೆಂದು ತಾತ್ತ್ವಿಕರು ಉತ್ತರ ಹೇಳಿಯಾರು. ಅದು ನಮಗೆ ಎಚ್ಚರಿಕೆಯ ಮಾತು. ನಾವು ಈಗ ಮೆಚ್ಚಿ ಮೆಚ್ಚಿ ಅಂಗೀಕರಿಸಿಕೊಂಡಿರುವ ರಾಜ್ಯಪದ್ಧತಿ ನಮ್ಮನ್ನೇ ಪರೀಕ್ಷಿಸುವುದಾಗಿದೆ. ನಮ್ಮ ರಾಜ್ಯ ಚನ್ನಾಗಿಲ್ಲವೆಂದರೆ ನಮ್ಮ ರಾಷ್ಟ್ರಕ ಯೋಗ್ಯತೆ ತಕ್ಕಮಟ್ಟಿಗೆ ಇಲ್ಲವೆಂದೇ ಅರ್ಥ. ಇದನ್ನು ಪ್ರತಿಯೊಬ್ಬ ರಾಷ್ಟ್ರಕನೂ ಚಿಂತಿಸುವುದಾದರೆ ಭಾರತದ ಭವಿಷ್ಯದ ವಿಷಯದಲ್ಲಿ ಚಿಂತೆಗೆ ಕಾರಣವಿರದು.

## “ರಾಮರಾಜ್ಯ”

ಇಂಡಿಯವು ರಾಜಕೀಯದಲ್ಲಿ ಯಾವ ಆದರ್ಶವನ್ನಿರಿಸಿಕೊಳ್ಳಬೇಕೆಂಬುದನ್ನು ಮಹಾತ್ಮ ಗಾಂಧಿಯವರು “ರಾಮರಾಜ್ಯ” ಎಂಬ ಒಂದು ಮಾತಿನಲ್ಲಿ ಅಡಕಮಾಡಿದ್ದಾರೆ. ಶ್ರೀರಾಮನ ರಾಜ್ಯದಲ್ಲಿ ದೋಷವಿರಲಿಲ್ಲ, ದುಃಖವಿರಲಿಲ್ಲ; ಎಲ್ಲೆಲ್ಲಿಯೂ ಸುಭಿಕ್ಷವಾಗಿ ಸಂತೋಷ ತುಂಬಿತ್ತು. ಅದು ಹೇಗಾಯಿತು? ಅಲ್ಲಿಯ ಪ್ರಜೆ ತಮ್ಮ ರಾಜನಾದ ರಾಮನ ಮೇಲ್ಪಂಕ್ತಿಯಂತೆ ನಡೆಯುತ್ತಿದ್ದದ್ದರಿಂದ. ಆ ರಾಮಚಂದ್ರ

ಸಾದರೋ ತ್ಯಾಗಮೂರ್ತಿ ; ತಂದೆಯ ಸತ್ಯಕ್ಕಾಗಿ ರಾಜ್ಯವನ್ನು ತ್ಯಾಗಮಾಡಿದವನು, ಲೋಕದ ಸಮಾಧಾನಕ್ಕಾಗಿ ಪ್ರಾಣಪ್ರಿಯೆಯನ್ನು ತ್ಯಾಗಮಾಡಿದವನು. ಆ ಸ್ವಾರ್ಥತ್ಯಾಗದ, ಆ ಲೋಕಹಿತ ನಿಷ್ಠೆಯ, ಆ ಉದಾರೋನ್ನತ ಜೀವನದ ನೀತಿಯನ್ನು ಕೋಸಲ ರಾಷ್ಟ್ರಕರು ಅಂಗೀಕರಿಸಿದ್ದದ್ದರಿಂದ ಅದು ರಾಮರಾಜ್ಯವಾಯಿತು. ರಾಷ್ಟ್ರಕರ ನೀತಿಯಿಂದ ರಾಜ್ಯದ ಸೌಭಾಗ್ಯ. ನಮ್ಮ ರಾಮಭಕ್ತಿ ನಿಜವಾದರೆ ನಮ್ಮ ರಾಷ್ಟ್ರಕ ಚರ್ಯೆಯಲ್ಲಿ ಅದು ಹೊರಹೊಮ್ಮಬೇಕು.

ಜನಪದಸೇವೆಯೆ ದೈನಾ-
ಚರ್ಯೆಯದು ನಮಗಾತ್ಮಭಾವವಿಸ್ತಾರನಯಂ |
ಅನುಗೊಳುವಂ ರಾಷ್ಟ್ರಕ ಜೀ-
ವನ ಕಾರ್ಯಂಗಳ್ಗೆ ದೀಕ್ಷಿತೋಚಿತ ಮತಿಯಂ ||

ಮಾನವ ಸಂಸ್ಕಾರಕ ಧ-
ರ್ಮಾನುವ್ರತಮಕ್ಕೆ ಸಾರ್ವಜನಿಕ ವಿಚಾರಂ |
ಜ್ಞಾನಿಯಿನಕ್ಕುಂ ಶುಭ ಸಂ-
ಧಾನಂ ರಾಜ್ಯಾದಿಲೌಕಿಕ ವ್ಯವಹೃತಿಯೊಳ್ ||

ಶ್ರೀರಸ್ತು

# ರಾಜ್ಯಶಾಸ್ತ್ರ

ಕ್ರೌನ್ ೮. viii + ೩೭೭ ಪುಟಗಳು ; ಏಳು ಚಿತ್ರಗಳು ; ಬೆಲೆ, ರೂ ೫.

ರಾಜ್ಯಶಾಸ್ತ್ರವನ್ನು ಕುರಿತು ಈ ಬಗೆಯ ವಿಸ್ತಾರವಾದ ಗ್ರಂಥ ಕನ್ನಡದಲ್ಲಿ ಪ್ರಕಟವಾಗುವುದು ಇದೇ ಮೊದಲು.

ಪಾಶ್ಚಾತ್ಯರಲ್ಲಿ ಪ್ರಸಿದ್ಧರಾಗಿರುವ ಪುರಾತನರಾದ ಪ್ಲೇಟೋ ಅರಿಸ್ಟೋಟಲ್ ಇವರಿಂದ ಹಿಡಿದು ನೂತನರಾದ ಮಿಲ್, ಲಾಸ್ಕಿ ಮೊದಲಾದ ಎಲ್ಲ ರಾಜ್ಯಶಾಸ್ತ್ರ ಲೇಖಕರ ತತ್ತ್ವಾಭಿಪ್ರಾಯ ಭಾವನೆಗಳ ಸಾರವನ್ನೂ ಭಾರತೀಯ ಪೂರ್ವಸಂಪ್ರದಾಯ ತತ್ತ್ವಗಳ ಸಾರಾಂಶವನ್ನೂ ಲೋಕಾನುಭವವನ್ನೂ ಒಳಗೊಂಡು, ಈ ಗ್ರಂಥವು ತನ್ನದೇ ಆದ ವೈದುಷ್ಯಪ್ರಭಾವದಿಂದ ಪಂಡಿತರ ಸಮೀಕ್ಷೆಗೂ ವಿದ್ಯಾರ್ಥಿಗಳ ವ್ಯಾಸಂಗಕ್ಕೂ ತಕ್ಕ ಪುಸ್ತಕವಾಗಿದೆ.

ರಾಜ್ಯಶಾಸ್ತ್ರದ ವಿಷಯ ನಮ್ಮ ಜನಕ್ಕೆ ಹೊಸದೂ ಅಪರಿಚಿತವೂ ಆದದ್ದಾದರೂ ವಿಷಯವನ್ನು ಖಚಿತವಾಗಿಯೂ, ಸ್ಪಷ್ಟವಾಗಿಯೂ, ತೊಡಕಿಲ್ಲದಂತೆಯೂ, ಅನುಭವೋಕ್ತಿಗಳಿಂದ ಸ್ವಾರಸ್ಯವುಳ್ಳದ್ದಾಗಿಯೂ ಬಹುಸಾಮಾನ್ಯರಾದ ಜನರಿಗಾಗಿ ಬರೆದ ಗ್ರಂಥವಿದು. ಹೀಗೆ ಪ್ರಜಾಜನರಿಗೆ ರಾಜ್ಯವ್ಯವಸ್ಥೆಯ ತಿಳಿವಳಿಕೆಯನ್ನುಂಟುಮಾಡಿಕೊಡಲು ಇದು ಅತ್ಯುತ್ತಮವಾದ ಗ್ರಂಥಸಾಧನವಾಗಿದೆ.

ಈ ಪುಸ್ತಕದ ಮಾರಾಟದಿಂದ ಬರುವ ಲಾಭಾಂಶವು ಬೆಂಗಳೂರಿನ ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಗೆ ಸೇರುತ್ತದೆ.

## ಅಭಿಪ್ರಾಯಗಳು

ಶ್ರೀ ಡಿ ವಿ.ಜಿ. ಯವರ 'ರಾಜ್ಯಶಾಸ್ತ್ರ'ವನ್ನೋದಿ ಮೂವತ್ತು ವರ್ಷಗಳ ಹಿಂದಿನ ಆಲೋಚನೆ ಇಂದು ಪೂರೈಸಿತು. . . ಕನ್ನಡಿಗರಿಗೆಲ್ಲ ಕನ್ನಡನಾಡಿನ ಜನರಿಗೆಲ್ಲ—ಸಂತೋಷವಾಯಿತೆಂದು ನಾನು ಹೇಳುತ್ತೇನೆ. ಕನ್ನಡದಲ್ಲಿ ಈ ಪ್ರಮಾಣದ, ಗುಣದ, ರಾಜ್ಯಶಾಸ್ತ್ರ ಗ್ರಂಥವನ್ನು ಬರೆಯಲು ಡಿ.ವಿ.ಜಿ. ಅವರೇ ಸಮರ್ಥರು. ಅಧಿಕಾರಿಗಳು

—ತೀ. ತಾ. ಶರ್ಮ.

ಇದೇ ವಿಮರ್ಶಕ ಮಹಾಶಯರು ಮೈಸೂರು ಸಂಸ್ಥಾನದ ನೂತನ ಮಂತ್ರಿಮಂಡಲ ರಚನೆಯ ಸಂದರ್ಭದಲ್ಲಿ 'ರಾಜ್ಯಶಾಸ್ತ್ರ'ದಿಂದ ಕೆಲವು

- - - - - - - - - - - - -

ಕಾವ್ಯಾಲಯ * ಪ್ರಕಾಶಕರು * ಮೈಸೂರು

'ವಚನ'ಗಳನ್ನು ಮೈಸೂರು ಶಾಸನ ಸಭೆಯ, ಮತ್ತು ಮುಖ್ಯವಾಗಿ ಕಾಂಗ್ರೆಸ್ ಪಕ್ಷದ, ಸದಸ್ಯರು ನೆನಪಿನಲ್ಲಿಡಬೇಕೆಂದು ಉದಾಹರಿಸಿರುತ್ತಾರೆ.

ತಾ. ೧೯-೬-೧೯೫೭ —ವಿಶ್ವಕರ್ಣಾಟಕ

ಶ್ರೀ ಗುಂಡಪ್ಪನವರ ೩೭೬ ಪುಟಗಳ ಈ ಹೊತ್ತಗೆಯು ನಮ್ಮ ದೇಶದ ಇಡೀ ರಾಜ್ಯಾಂಗವನ್ನೇ ಅವಲೋಕನ ಮಾಡುತ್ತದೆ. ವಿಮರ್ಶಿಸುತ್ತದೆ ವಿವರಿಸುತ್ತದೆ; ಸಂದಿಗ್ಧ ಸಮಸ್ಯೆಗಳನ್ನು ಭೇದಿಸುತ್ತದೆ, ನಿವಾರಿಸುತ್ತದೆ ಇತರ ರಾಷ್ಟ್ರಗಳೊಡನೆ ತುಲನೆ ಮಾಡುತ್ತದೆ, ಸಮೀಕರಿಸಲು ಯತ್ನಿಸುತ್ತದೆ. ಪ್ರಜಾಸಾಮಾನ್ಯರಿಗೂ ರಾಜಕಾರಣಿಗಳಿಗೂ ಸಹ ಸಮಾನವಾಗಿ ರಾಜ್ಯನಿರ್ವಹಣೆಯ ತಿಳಿವಳಿಕೆಯನ್ನೂ ಜವಾಬ್ದಾರಿಯನ್ನೂ ಮನದಟ್ಟು ಮಾಡಿಕೊಡುತ್ತದೆ. . . .

ರಾಜಕೀಯ ಶಾಸ್ತ್ರದ ವಿದ್ಯಾರ್ಥಿಗಳಿಗೆ ಉತ್ತಮ ಪಠ್ಯಪುಸ್ತಕವಿದು ರಾಜಕಾರಣಿಗಳಿಗೆ ಉತ್ತಮ ಕೈಪಿಡಿಯಿದು, ಸಾಹಿತ್ಯಕ್ಕೆ ಮತ್ತು ಶಬ್ದ ಭಂಡಾರಕ್ಕೆ ಅನರ್ಘ್ಯ ಕಾಣಿಕೆಯಿದು.

—ತಾಯಿನಾಡು

ಭಾರತೀಯರ ಪೂರ್ವರಾಜ್ಯ ಸಂಪ್ರದಾಯ ತತ್ತ್ವಗಳನ್ನೂ ಪಾಶ್ಚಾತ್ಯರ ಪುರಾತನ-ನೂತನ ರಾಜ್ಯ ತತ್ತ್ವಗಳನ್ನೂ ಮಥಿಸಿ ನೋಡಿ, ಅವುಗಳಿಂದ ಒಂದು ಸಾರವನ್ನು ಒಂಡಿ, ಹೀಗೆ ಪಂಡಿತರಿಗೂ ಹಾಗೆ ಪಾಮರರಿಗೂ ರುಚಿಸುವಂಥ ಒಂದು ಗ್ರಂಥರಾಜ್ಯವನ್ನು ಇದೀಗ ಕನ್ನಡದಲ್ಲಿ ಶ್ರೀಮಾನ್ ಡಿ. ವಿ. ಗುಂಡಪ್ಪನವರು ಬರೆದಿರುತ್ತಾರೆ. . . . ರಸವತ್ತಾದ ಕಾವ್ಯದಿಂದ ಹಿಡಿದು ಅತಿ ಜಟಿಲವಾದ ರಾಜಕೀಯ ತತ್ತ್ವದ ವರೆಗೆ ಅವರ ಲೇಖನಿ ನಿರರ್ಗಳವಾಗಿ ಹರಿಯುತ್ತದೆ. ಕನ್ನಡಿಗರ ರಾಜಕೀಯ ಜ್ಞಾನದ ಬೆಳವಣಿಗೆಗೆ ಈ ಪುಸ್ತಕದಿಂದ ಅಪಾರ ಸಹಾಯವಾಗುತ್ತದೆಂದು ಧಾರಾಳವಾಗಿ ಹೇಳಬಹುದು. ವಿಷಯ ತಿಳಿದಿರುವವರಿಗೂ ಕೂಡ ಇಲ್ಲಿ ಸಿಕ್ಕುವ ಶಾಸ್ತ್ರದ ಒಂದು ಸಮಗ್ರನೋಟ ಮನೋಜ್ಞವಾದದ್ದು. ಗ್ರಂಥಕರ್ತರ ವಿಷಯಪ್ರತಿಪಾದನ ಕ್ರಮ, ಲೋಕಾನುಭವ, ಪ್ರೌಢಶೈಲಿ, ವಸ್ತುಮಹತ್ತ್ವಗಳ ದೃಷ್ಟಿಯಿಂದ ಈ ಗ್ರಂಥವನ್ನು ಆಮೂಲಾಗ್ರವಾಗಿ ಓದಬೇಕೆಂದು ಯಾರಿಗಾದರೂ ಅನ್ನಿಸುತ್ತದೆ. . . . ವಿಸ್ತಾರಾನುಭವಕ್ಕಲ್ಲದೆ ಅಲ್ಪಶಕ್ತಿಗೆ ಈ ಬಗೆಯ ಗ್ರಂಥ ರಚನೆ ಸಾಧ್ಯವಲ್ಲ.

—ಪೌರವಾಣಿ